# ಚಂದ್ರಗುಪ್ತ ಚಕ್ರವರ್ತಿ

ಇದು ಆಂಧ್ರಭಾಷೆಯಲ್ಲಿ

ವಿಜ್ಞಾನಚಂದ್ರಿಕಾ ಗ್ರಂಥಮಾಲೆಗಾಗಿ

**ಶ್ರೀಸ್ವಾಮಿ ವಿದ್ಯಾನಂದ ಪರಮಹಂಸ** ಬಿ. ಎ.

ಇವರಿಂದ ರಚಿಸಲ್ಪಟ್ಟು

**ಎ. ವೆಂಕಟರಾವ್,** ಬಿ. ಎ., ಎಲ್. ಟಿ.

ಕನ್ನಡ ರೀಡರ್, ಮದ್ರಾಸ್ ಯೂನಿವರ್ಸಿಟಿ,

ಇವರಿಂದ

ಕನ್ನಡ ಭಾಷೆಗೆ ಪರಿವರ್ತಿಸಲಾಯಿತು.

ದ್ವಿತೀಯಾವೃತ್ತಿ, 1000 ಪ್ರತಿಗಳು.

1928.

Printed at
The People's Printing and Publishing House,
132, Big Street, Triplicane, MADRAS.

# PREFACE.



This little book which I now venture to submit to the Kanarese public, is, as the little page itself points out a translation of the Telugu original written by SRI SWAMI VIDYANANDA PARAMAHAMSA B.A., for the "VIJNANA CHANDRIKA" series. I had for long, an idea of writing short monographs in Kanarese on the celebrities of Indian History, and was collecting the necessary information, but was rather hesitating as regards the plan of arranging the matter. Fortunately, the Telugu original of this work was placed in my hands by a friend, and on reading it, I found the style, the arrangement of matter , and the general tone of the book so good, that I immediately took to translating it and now take the liberty of introducing the same to the Kanarese reading public.

My work here has been merely a literal translation, slight changes being made here and there, in conformity with the Kanarese idiom. I sincerely thank Dr. A. Lakshmipathy. B, A. M. B. & C. M., Manager of the "Vijnana Chandrika" series for having kindly permitted me to translate the book into Kanarese.

Further, special mention is to be made of M. R. Ry. Benagal Rama Rau Avergal, M. A., LL. B., Senior Translator to the Government of Madras, for his having encouraged me to take this work on hand, and watched the progress of the work with keen interest, throwing out valuable suggestions during its preparation. Besides this, M. R. Ry. Bantwal Sitarama Rau Avergal, B. A.. B. L., High Court Vakil, Mylapore, took great interest in my work and helped me in all ways possible. Thus, in short, this work is chiefly

an outcome of the inspiring influence of these two gentlemen, and I frankly confess that I am unable to express my gratitude towards them adequately.

MYLAPORE.
*28--2—1917.*

**A. VENKATA RAU.**



# PREFACE TO THE SECOND EDITION.

In this, the matter has been carefully revised and suggestions from kind friends have been incorporated as for as possible. I tender my grateful thanks to BRAHMASRI VIDWAN PANYAM SUNDARA SASTRULU, Assistant Librarian Government Oriental Manuscripts Library for having undertaken the laborious work of revision in the light of the changes suggested.

TRIPLICANE,
*18---6—1928.*

**A. VENKATA RAU.**
*Reader in Kanarese,*
*University of Madras.*



# ಪೀಠಿಕೆ



**ವಾಚಕ ಮಹಾಶಯರೇ!**

ತಮ್ಮೆಲ್ಲರ ಅವಲೋಕನಕ್ಕಾಗಿ ತಮ್ಮ ಸನ್ನಿಧಾನದಲ್ಲಿ ಸಮರ್ಪಿಸಲ್ಪಟ್ಟ ಈ ಚಿಕ್ಕ ಪುಸ್ತಕವು, ಮುಖಪತ್ರದಿಂದಲೇ ಗೊತ್ತಾಗುವಂತೆ, ತೆಲುಗಿನಲ್ಲಿ **"ವಿಜ್ಞಾನಚಂದ್ರಿಕಾ"**ಗ್ರಂಥಮಾಲೆಗಾಗಿ **ಶ್ರೀ ಸ್ವಾಮಿ ವಿದ್ಯಾನಂದ ಪರಮಹಂಸ, ಬಿ. ಎ.** ಇವರಿಂದ ರಚಿಸಲ್ಪಟ್ಟುದರ ಪರಿವರ್ತನವಾಗಿದೆ. ಈ ಮೊದಲೇ ಭಾರತೀಯ ಇತಿಹಾಸದೊಳಗಣ ಮಹಾಪುರುಷರ ಜೀವನಚರಿತ್ರೆಗಳ ಕುರಿತು ಚಿಕ್ಕಚಿಕ್ಕ ಉಪನ್ಯಾಸರೂಪವಾದ ಪುಸ್ತಕಗಳನ್ನು ಕನ್ನಡದಲ್ಲಿ ಬರೆಯಬೇಕೆಂಬ ಉದ್ದೇಶದಿಂದ, ಅದಕ್ಕೆ ಬೇಕಾದ ಸಾಧನಗಳನ್ನು ಸಂಗ್ರಹಿಸುತ್ತಲಿದ್ದೆನು. ಅಷ್ಟರೊಳಗೆ ಮಿತ್ರರೊಬ್ಬರು ಆಂಧ್ರಭಾಷೆಯಲ್ಲಿದ್ದ "ಚಂದ್ರಗುಪ್ತ ಚಕ್ರವರ್ತಿ" ಎಂಬ ಪುಸ್ತಕವನ್ನು ಕೊಟ್ಟರು. ಅದನ್ನು ನೋಡಲಾಗಿ ಶೈಲಿಯೂ, ವಿಷಯವೂ, ಅನುಸರಿಸಲ್ಪಟ್ಟ ಕ್ರಮವೂ, ಎಲ್ಲ ಭಾಗದಲ್ಲಿಯೂ ಉತ್ತಮವಾಗಿ ತೋರಿಬಂದುದರಿಂದ, ಇದನ್ನು ಕನ್ನಡ ಭಾಷೆಗೆ ಪರಿವರ್ತಿಸಿದಲ್ಲಿ ಹೆಚ್ಚಿನ ಉಪಯೋಗವುಂಟಾಗಬಹುದೆಂದು ಈ ಕೆಲಸವನ್ನು ಕೈಕೊಂಡೆನು. ಈ ಪುಸ್ತಕದ ಶೈಲಿಯೂ, ಕ್ರಮವೂ, ಪದಬಂಧ ವಾಕ್ಯಬಂಧಗಳೂ, ಹೆಚ್ಚಿನ ಮಟ್ಟಿಗೆ ತೆಲುಗಿನ ಪ್ರತಿಯನ್ನೇ ಅನುಸರಿಸಿ ಇದೆ.

ಆಂಧ್ರಭಾಷೆಯೊಳಗಣ ಪುಸ್ತಕವನ್ನು ಕನ್ನಡಕ್ಕೆ ಪರಿವರ್ತಿಸಲು ಅನುಮತಿಯನ್ನು ಕೊಟ್ಟುದಕ್ಕಾಗಿ **ಮ. ರಾ. ಡಾಕ್ಟರ್ ಎ. ಲಕ್ಷ್ಮೀಪತಿ, ಬಿ. ಎ., ಎಮ್. ಬಿ. ಸಿ. ಎಮ್.,** ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಇವರು "ವಿಜ್ಞಾನಚಂದ್ರಿಕಾ" ಗ್ರಂಥಮಾಲೆಯ ಕಾರ್ಯದರ್ಶಿಗಳು.

ಈ ಪುಸ್ತಕವನ್ನು ಅಗತ್ಯವಾಗಿ ಬರೆಯಬೇಕೆಂದು ಬಲವಾದ ಉತ್ತೇಜನವನ್ನು ಕೊಟ್ಟು, ಆಗಾಗ ಬೇಕಾದ ಸೂಚನೆಗಳನ್ನಿತ್ತು, ಗ್ರಂಥವನ್ನಾರಂಭಿಸಿದಂದಿನಿಂದ ಇಂದಿನವರೆಗೂ ಸರ್ವ ವಿಧದಲ್ಲಿಯೂ ಸಹಾಯಮಾಡುತ್ತಿರುವ, ಮದ್ರಾಸು ಸರ್ಕಾರದ ಟ್ರಾನ್ಸ್‌ಲೇಟರರಾದ **ಮ. ರಾ. ಬೆನಗಲ್ಲ ರಾಮರಾವು, ಎಮ್. ಎ., ಎಲ್. ಎಲ್. ಬಿ.** ಇವರಿಗೂ, ಮದ್ರಾಸು ಹೈಕೋರ್ಟು ವಕೀಲರಾದ **ಮ. ರಾ. ಬಂಟ್ವಾಳ ಸೀತಾರಾಮರಾವು ಬಿ. ಎ., ಬಿ. ಎಲ್.** ಇವರಿಗೂ,

ನಾನೆಷ್ಟು ಕೃತಜ್ಞನಾಗಿದ್ದರೂ ಸಾಲದು. ಈ ಇಬ್ಬರು ದೊಡ್ಡಮನುಷ್ಯರೇ ಈ ಗ್ರಂಥವನ್ನು ನನ್ನಿಂದ ಬರೆಯಿಸಿದವರೆಂದು ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ.

ಮೈಲಾಪುರ,
ಮದ್ರಾಸು.
28-2-1917.

ಎ. ವೆಂಕಟರಾವ್.



# ಎರಡನೆಯ ಮುದ್ರಣದ ಪೀಠಿಕೆ.

ಈಗ ಪ್ರಚಾರಗೊಳಿಸಿರುವ ದ್ವಿತೀಯ ಆವೃತ್ತಿಯಲ್ಲಿ, ಹಿಂದಣ ಆವೃತ್ತಿಯಲ್ಲಿ ಕಂಡುಬಂದ ದೋಷಗಳನ್ನು ಆದಷ್ಟುಮಟ್ಟಿಗೆ ತಿದ್ದಿದೆ. ಮದ್ರಾಸಿನ ಗೌರ್ನಮೆಂಟು ಓರಿಯಂಟಲ್ ಮೆನ್ಯುಸ್ಕ್ರಿಪ್ಟ್ ಲೈಬ್ರೆರಿಯ ಅಸಿಸ್ಟಾಂಟ್ ಲೈಬ್ರೇರಿಯನ್‌ರಾದ **ಬ್ರಹ್ಮಶ್ರೀ ವೇದಮೂರ್ತಿಗಳಾದ ವಿದ್ವಾನ್ ಪಾಣ್ಯಂ ಸುಂದರ ಶಾಸ್ತ್ರಿಗಳವರು** ಈ ಕಾರ್ಯವನ್ನು ಸಂಪೂರ್ಣವಾಗಿಯೂ ಸಮರ್ಪಕವಾಗಿಯೂ ನೆರವೇರಿಸಿದುದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿರುತ್ತೇನೆ.

ತಿರುವಲ್ಲಿಕ್ಕೇಣಿ.
ಮದರಾಸು.
18-6-1928.

ಎ. ವೆಂಕಟರಾವ್.
ಕನ್ನಡ ರೀಡರ್
ಮದ್ರಾಸು ಯೂನಿವರ್ಸಿಟಿ. ಮದ್ರಾಸು.



॥ ಶ್ರೀಯೈ ನಮಃ ॥

# ಚಂದ್ರಗುಪ್ತ ಚಕ್ರವರ್ತಿ.



## ಮೊದಲನೆಯ ಪ್ರಕರಣ.

### ಮಗಧ ರಾಜ್ಯವು.

ಮಗಧವು ಆರ್ಯಾವರ್ತದಲ್ಲಿ ಬಹು ಪುರಾತನಕಾಲದಿಂದಲೂ ಪ್ರಖ್ಯಾತಿ ಹೊಂದಿದ ಒಂದು ಮಹಾರಾಜ್ಯವಾಗಿದೆ. ಈ ರಾಜ್ಯದ ವಿಸ್ತಾರವು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವಿಧವಾಗಿದ್ದರೂ, ಒಟ್ಟಿನ ಮೇಲೆ ಈ ದೇಶಕ್ಕೆ ಉತ್ತರದಲ್ಲಿ ಗಂಗಾ ನದಿಯೂ, ದಕ್ಷಿಣದಲ್ಲಿ ವಿಂಧ್ಯಗಿರಿಯೂ, ಪಶ್ಚಿಮದಲ್ಲಿ ಶೋಣಾನದಿಯೂ, ಪೂರ್ವದಲ್ಲಿ ಚಂಪಾ ದೇಶವೂ ಎಲ್ಲೆಗಳಾಗಿದ್ದುವೆಂದು ಹೇಳಬಹುದು. ಈಗ ಈ ಪ್ರದೇಶವನ್ನು ದಕ್ಷಿಣ ಬಿಹಾರವೆಂದು ಕರೆವರು. ಬಿಹಾರೆಂಬ ಪದವು ವಿಹಾರ ಶಬ್ದದಿಂದ ಹುಟ್ಟಿದುದು. ಬೌದ್ಧರ ಕಾಲದಲ್ಲಿ ಈ ರಾಜ್ಯದ ಸುತ್ತಳತೆಯು ಎರಡುಸಾವಿರದ ಮುನ್ನೂರು ಮೈಲಿಗಳೂ ಇದರೊಳಗಣ ಗ್ರಾಮಗಳ ಸಂಖ್ಯೆಯು ಎಂಟು ಸಾವಿರವೂ ಆಗಿದ್ದಿತು.

ಮಗಧದೇಶದ ರಾಜಧಾನಿಯು ಪ್ರಥಮದಲ್ಲಿ ಗಿರಿವ್ರಜವೆಂಬ ದುರ್ಗವು. ತದನಂತರದಲ್ಲಿ ಕ್ರಮವಾಗಿ ರಾಜಗೃಹ, ವೈಶಾಲಿ, ಪಾಟಲೀಪುತ್ರ ಎಂಬ ಪಟ್ಟಣಗಳು ರಾಜಧಾನಿಗಳಾದುವು. ಉತ್ತರಪ್ರಾಂತಗಳಲ್ಲಿಯ ರಾಜ್ಯಗಳ ಅಭಿವೃದ್ಧಿಯೇ ಇಂತಹ ಮಾರ್ಪಾಡುಗಳಿಗೆ ಮುಖ್ಯ ಕಾರಣವು. ಗಿರಿವ್ರಜವು ಐದು ಪರ್ವತಗಳ ನಡುವೆ ನಿರ್ಮಿಸಲ್ಪಟ್ಟ ಒಂದು ದುರ್ಗವು. ರಾಮಾಯಣದಲಿ ಗಿರಿವ್ರಜವು ಹೀಗೆಯೇ ವರ್ಣಿತವಾಗಿದೆ.*

---

*ಬಾಲಕಾಂಡ ೩೨ನೆಯ ಸರ್ಗ.

ಮಹಾಭಾರತದಲ್ಲಿ ಈ ಪರ್ವತಗಳ ಹೆಸರುಗಳು, ವೈಹಾರ, ವರಾಹ ವೃಷಭ ವೃಷಗಿರಿ, ಚೈತ್ಯಕಗಳೆಂದು ಹೇಳಿದೆ.* ಈಗ ಈ ಪರ್ವತಗಳನ್ನು ಜನರು ವೈಭಾರ, ವಿಪುಲ, ರತ್ನೋದಯ, ಸೋನಗಿರಿಯೆಂದು ಕರೆವರು. ವೈಭಾರ ಪರ್ವತದ ಮೇಲೆ ಜೈನರ ಶಾಸನಗಳು ಹೇರಳವಾಗಿವೆ. ಈ ಪರ್ವತದ ಮೇಲೆಯೇ ಕ್ರಿ. ಪೂ. ೪೩೭ರಲ್ಲಿ ಬೌದ್ಧರ ಪ್ರಥಮ ಪಾಂಚವಾರ್ಷಿಕಸಂಘವು ನೆರೆದಿದ್ದಿತು. ಗಿರಿವ್ರಜದ ಸುತ್ತಳತೆಯು ನಾಲ್ಕೂವರೆಮೈಲು. ಈ ಗಿರಿವ್ರಜವನ್ನು ಕುಶರಾಜನ ಮಗನಾದ ವಸುರಾಜನು ಕಟ್ಟಿಸಿದನು. ಶಿಲ್ಪಿಯ ಹೆಸರು ಮಹಾಗೋವಿಂದ. ಗಿರಿವ್ರಜದ ಕಲ್ಲುಗೋಡೆಗಳಿಗಿಂತ ಪುರಾತನವಾದ ಕಟ್ಟಡಗಳಾವುವೂ ಆರ್ಯಾವರ್ತದಲ್ಲಿ ಕಂಡುಬರುವುದಿಲ್ಲ. ಗಿರಿವ್ರಜವನ್ನೇ ಈಗಳಿನ ಜನರು ಪುರಾತನದ ರಾಜಗೃಹವೆಂದು ಹೇಳುವರು.

ರಾಜಗೃಹಪಟ್ಟಣವು ಗಿರಿವ್ರಜಕ್ಕೆ ಉತ್ತರದಲ್ಲಿ ಅರ್ಧಕ್ರೋಶ ದೂರದಲ್ಲಿ ನಿರ್ಮಿತವಾಗಿದೆ. ಈ ಪಟ್ಟಣವನ್ನು ಬಿಂಬಿಸಾರನೆಂಬ ನೃಪಪುಂಗವನು ಕಟ್ಟಿಸಿದನು. ಈತನ ಮಗನಾದ ಪ್ರಜಾತಶತ್ರುವು ಗೌತಮಬುದ್ಧನಿಗೆ ಸಮಕಾಲಿಕನು. ಪ್ರಸ್ತುತ, ಈ ಸ್ಥಳದಲ್ಲಿ ರಾಜಗಿರ್ ಎಂಬ ಜೀರ್ಣದುರ್ಗವೊಂದಿದೆ. ಈಗಲಿನ್ನು ಮಗಧದೇಶದ ರಾಜರುಗಳನ್ನು ಕುರಿತು ವಿಚಾರಿಸುವ.

ಮಹಾಭಾರತಕಾಲದಲ್ಲಿ ಜರಾಸಂಧನೆಂಬ ರಾಜನು ಅಲ್ಲಿ ರಾಜ್ಯವಾಳುತ್ತಿದ್ದನು. ಆತನು ಮಹಾ ಪರಾಕ್ರಮಶಾಲಿ. ಆತನ ಹಿಂಸೆಯನ್ನು ತಡೆಯಲಾರದೆ ಯಾದವರು ಮಧುರಾನಗರವನ್ನು ಬಿಟ್ಟು ಓಡಿಹೋಗಿ ದ್ವಾರಕೆಯಲ್ಲಿ ವಾಸಮಾಡತೊಡಗಿದರು. ಅನೇಕ ರಾಜರುಗಳನ್ನು ಹಿಡಿದುತಂದು ತನ್ನ ಸೆರೆಮನೆಯಲ್ಲಿಟ್ಟಿದ್ದನೆಂಬುದಾಗಿ ಮಹಾಭಾರತದಲ್ಲಿ ವರ್ಣಿಸಿರುವುದನ್ನು ನೋಡಿದರೆ, ಆತನು ಅಸಾಮಾನ್ಯ ಪರಾಕ್ರಮಶಾಲಿಯೆಂತಲೂ ಅನೇಕ ರಾಜರುಗಳನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ಪ್ರಭುತ್ವ ಮಾಡುತ್ತಿದ್ದ ಚಕ್ರವರ್ತಿಯೆಂತಲೂ ತೋರುತ್ತದೆ. ಧರ್ಮರಾಯನು ರಾಜಸೂಯ ಯಜ್ಞವನ್ನು ಮಾಡಲುದ್ಯಮಿಸಿದಾಗ ಕೃಷ್ಣಭೀಮಾರ್ಜುನರು ಗಿರಿವ್ರಜಕ್ಕೆ ಬ್ರಾಹ್ಮಣರಂತೆ ಹೋಗಿ ಜರಾಸಂಧನನ್ನು ಕೊಂದು, ಆತನ ಸೆರೆಮನೆಯಲ್ಲಿದ್ದ ಅಸಂಖ್ಯರಾದ ಮೂರ್ಧಾಭಿಷಿಕ್ತರನ್ನು ಬಿಡಿಸಿ, ಆತನ ಮಗನಾದ ಸಹದೇವನಿಗೆ ಪಟ್ಟಾಭಿಷೇಕ ಮಾಡಿದ ಸಂಗತಿಯು ಮಹಾಭಾರತವನ್ನು ಓದಿದವರೆಲ್ಲರಿಗೂ ತಿಳಿದವಿಷಯವೇ ಆಗಿರುವುದು.

---

*ಸಭಾಪರ್ವ ೨೧ನೆಯ ಅಧ್ಯಾಯ.

ಮಹಾಭಾರತ ಯುದ್ಧದಲ್ಲಿ ಈ ಸಹದೇವನು ಪಾಂಡವಪಕ್ಷವಾಗಿ ಹೋರಾಡಿ ಹತನಾದನು. ಆತನ ತರುವಾಯ ಈ ವಂಶದವರಾದ ಇಪ್ಪತ್ತೊಂದು ಮಂದಿ ರಾಜರು ರಾಜ್ಯವಾಳಿದರು. ಕೊನೆಯವನು ಪುರಂಜೀವನು. ಇವನನ್ನೇ ರಿಪುಂಜಯನೆನ್ನುವರು. ಇವರೆಲ್ಲರೂ ಒಟ್ಟು ಒಂದುಸಾವಿರ ವರುಷಗಳ ವರೆಗೆ ರಾಜ್ಯವಾಳಿದರೆಂದು ಪುರಾಣಗಳಿಂದ ತಿಳಿಯಬರುತ್ತದೆ. ಪುರಂಜಯನ ಮಂತ್ರಿಯಾದ ಶುನಕನು ರಾಜನನ್ನು ಕೊಂದು, ತನ್ನ ಮಗನಾದ ಪ್ರದ್ಯೋತನಿಗೆ ಪಟ್ಟಗಟ್ಟಿದನು. ಈ ವಂಶದವರೈವರು ರಾಜ್ಯವಾಳಿದರು. ಕೊನೆಯವನಾದ ನಂದಿವರ್ಧನನನ್ನು ಕೊಂದು ಆತನ ಮಂತ್ರಿಯಾದ ಶಿಶುನಾಗನು ರಾಜನಾದನು. ಈ ವಂಶಕ್ಕೆ ಶಿಶುನಾಗವಂಶವೆಂದು ಹೆಸರು. ಶಿಶುನಾಗ, ಕಾಕವರ್ಣ, ಕ್ಷೇಮಧರ್ಮ, ಕ್ಷತ್ರೌಜ, ಬಿಂಬಿಸಾರ, ಅಜಾತಶತ್ರು, ದರ್ಶಕ, ಉದಯ, ನಂದಿವರ್ಧನ, ಮಹಾನಂದಿ ಎಂಬುದಾಗಿ ಶೈಶುನಾಗರು ಹತ್ತು ಮಂದಿ ರಾಜರಾಗಿದ್ದರು.

ಶಿಶುನಾಗನು ಕ್ರಿ.ಪೂ. ಏಳನೆಯ ಶತಮಾನದಲ್ಲಿ ರಾಜನಾದನೆಂದು ಹೇಳಬಹುದು. ಈ ವಂಶದಲ್ಲಿ ಐದನೆಯವನು ಬಿಂಬಿಸಾರನು. ಈತನಿಗೆ ಶ್ರೇಣಿಕನೆಂಬ ನಾಮಾಂತರವಿರುವುದು. ಈತನು ಕ್ರಿ. ಪೂ. ೫೨೮ನೆಯ ಸಂವತ್ಸರದ ವೇಳೆಗೆ ಅಂಗರಾಷ್ಟ್ರವನ್ನು ಆಕ್ರಮಿಸಿ ವಶಮಾಡಿಕೊಂಡನು. ಮತ್ತು ಕೋಸಲ ರಾಜನ ಮಗಳನ್ನೂ, ಲಿಚ್ಛವೀವಂಶದ ಕನ್ಯೆಯೊಬ್ಬಳನ್ನೂ ವಿವಾಹವಾದನು. ಈ ರಾಜನು ಆಳುತ್ತಲಿರುವಾಗಲೇ ಗೌತಮಬುದ್ಧನೂ, ಮಹಾವೀರನೂ ತಮ್ಮ ತಮ್ಮ ಹೊಸ ಸಿದ್ಧಾಂತಗಳನ್ನು ಮಗಧ ದೇಶದವರಿಗೆ ಬೋಧಿಸಿ ನೂತನ ಮತಾಭಿವೃದ್ಧಿಯನ್ನು ಮಾಡಿದರು. ಜೈನಮತಾಚಾರ್ಯನಾದ ಮಹಾವೀರನು ಬಿಂಬಿಸಾರನ ಎರಡನೆಯ ಹೆಂಡತಿಗೆ ಸಮೀಪಬಂಧು. ಗೌತಮಬುದ್ಧನು ತನ್ನ ಜೀವಿತಕಾಲದ ಹೆಚ್ಚಿನ ಭಾಗವನ್ನು ಈತನ ರಾಜ್ಯದಲ್ಲಿಯೇ ಕಳೆದನು. ರಾಜ್ಯವನ್ನು ಬಿಟ್ಟು ಸನ್ಯಾಸಿಯಾಗಿ ಹೊರಟ ತರುವಾಯ ಬುದ್ಧನು ಮೊತ್ತಮೊದಲು ರಾಜಗೃಹದಲ್ಲಿಯೇ ಗುರುಗಳ ಬಳಿ ತತ್ವವಿಚಾರವನ್ನು ಕಲಿತನು. ಆತನು ಬುದ್ಧತ್ವವನ್ನು ಹೊಂದಿದ ಬುದ್ಧಗಯೆಯು ಕೂಡ ಮಗಧದೇಶಕ್ಕೇ ಸೇರಿದುದು.

ಬುದ್ಧನು ಬಿಂಬಿಸಾರನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡು ರಾಜಗೃಹ ಪಟ್ಟಣದ ಹೊರಗಿದ್ದ ವೇಣುವನದಲ್ಲಿ ವಿಶೇಷವಾಗಿ ವಾಸಮಾಡುತ್ತಿದ್ದನು. ಅನೇಕಾನೇಕ ರಾಜರೂ, ವಿದ್ವಾಂಸರೂ, ಬ್ರಹ್ಮವೇತ್ತರೂ ವೇಣುವನಕ್ಕೆ ಬಂದು ಆತನ ಮತವನ್ನು ಸ್ವೀಕರಿಸಿದರು. ಬುದ್ಧನು ನಿರ್ವಾಣವನ್ನು ಹೊಂದಿದ ವರುಷ

ರಾಜಗೃಹದ ಹತ್ತಿರ ಸಪ್ತಪರಿಣೆಯ ಗುಹೆಯಲ್ಲಿ ಏಳುನೂರು ಮಂದಿ ಬೌದ್ಧಾಚಾರ್ಯರು ಸೇರಿ ಬುದ್ಧನ ಉಪದೇಶ ವಾಕ್ಯಗಳನ್ನು ಮೂರು ಪಿಟಕಗಳಾಗಿ ಸಂಗ್ರಹಿಸಿದರು.

ಬಿಂಬಿಸಾರನು ಇಪ್ಪತ್ತೆಂಟು ವರುಷಗಳಕಾಲ ರಾಜ್ಯವನ್ನಾಳಿ, ತನ್ನ ಎರಡನೆಯ ಹೆಂಡತಿಯ ಮಗನಾದ ಅಜಾತಶತ್ರುವಿಗೆ ಪಟ್ಟಕಟ್ಟಿ ತಾನು ಮುಕ್ತಿಮಾರ್ಗವನ್ನು ಹುಡುಕುತ್ತಿದ್ದನು. ಆದರೆ ಅಜಾತಶತ್ರುವು ದುರ್ಮಾರ್ಗನಾಗಿ ದೇವದತ್ತನೆಂಬುವನ ಬೋಧನೆಯಿಂದ ತನ್ನ ತಂದೆಯನ್ನು ಕೊಲ್ಲಿಸಿದನು.

ಅಜಾತಶತ್ರುವು ಕ್ರಿ. ಪೂ. ೫೦೦ರ ಕೊನೆಯಲ್ಲಿ ರಾಜ್ಯಕ್ಕೆಬಂದನೆಂದು ಹೇಳಬಹುದು. ಗೌತಮಬುದ್ಧನ ಬೋಧನೆಯಿಂದ ಈತನಿಗೆ ತಾನು ಮಾಡಿದ ಪಿತೃಹತ್ಯೆಗಾಗಿ ಪಶ್ಚಾತ್ತಾಪವುಂಟಾಯಿತೆಂತಲೂ, ತರುವಾಯ ಆತನು ಪರಿಶುದ್ಧಾಚರಣೆಯುಳ್ಳವನಾಗಿದ್ದನೆಂತಲೂ, ಬೌದ್ಧಗ್ರಂಥಗಳು ಹೇಳುತ್ತಿವೆ. ಈ ಅಜಾತಶತ್ರುವಿಗೂ ಕೋಸಲದೇಶದ ರಾಜನಿಗೂ ನಡೆದ ಯುದ್ಧವಿಷಯವಾದ ಒಂದು ಕೇಳಿಕೆಯ ಕಥೆಯುಂಟು. ಆಗಳಿನ ಕೋಸಲಾಧೀಶ್ವರನು ಪಸೇನದಿ (ಪ್ರಸೇನಧೀ) ಎಂಬುವನು. ಈತನ ಅಕ್ಕನಾದ ಕೋಸಲಾದೇವಿಯು ಬಿಂಬಿಸಾರನ ಮೊದಲನೆಯ ಹೆಂಡತಿಯು-ಎಂದರೆ ಅಜಾತಶತ್ರುವಿಗೆ ಮಲತಾಯಿಯು. ತನ್ನ ಸವತಿಯ ಮಗನಾದ ಅಜಾತಶತ್ರುವು ತನ್ನ ಗಂಡನನ್ನು ಕೊಲ್ಲಲು, ಕೋಸಲಾದೇವಿಯು ಆ ದುಃಖದಿಂದ ಮರಣಹೊಂದಿದಳು. ಕೋಸಲರಾಜರು ಕಾಶೀರಾಜ್ಯದೊಳಗಣ ಕೆಲವು ಗ್ರಾಮಗಳನ್ನು ಕೋಸಲಾದೇವಿಗೆ ಬಳುವಳಿಯಾಗಿ ಕೊಟ್ಟಿದ್ದರು. ಆಕೆಯು ಸತ್ತಕೂಡಲೇ, ಆ ಗ್ರಾಮಗಳನ್ನು ಕೋಸಲರಾಜನಾದ ಪಸೇನದಿಯು ಆಕ್ರಮಿಸಿದನು. ಆ ಮೇಲೆ ಮುದುಕನಾದ ಪಸೇನದಿಗೂ ಆತನ ಸವತಿ ಸೋದರಳಿಯನಾದ ಅಜಾತ ಶತ್ರುವಿಗೂ ಯುದ್ಧವು ಪ್ರಾರಂಭವಾಯಿತು. ಮೊದಲು ಅಜಾತಶತ್ರುವಿಗೆ ಕೊಂಚ ಜಯವುಂಟಾದರೂ, ನಾಲ್ಕನೆಯ ಸಾರಿ ಆತನು ದಂಡೆತ್ತಿ ಹೊರಟಾಗ ಪಸೇನದಿಯಿಂದ ಸೆರೆಹಿಡಿಯಲ್ಪಟ್ಟನು. ಕಾಶೀದೇಶದ ಗ್ರಾಮಗಳ ಮೇಲೆ ತನಗೇನೂ ಸಂಬಂಧವಿಲ್ಲವೆಂದು ಹೇಳಿಸಿಕೊಂಡು ಕೋಸಲಾಧಿಪತಿಯು ಆತನನ್ನು ಬಿಟ್ಟುಬಿಟ್ಟನು. ಆದರೆ ಸೆರೆಯಲ್ಲಿದ್ದಾಗ ಆತನಿಗೂ ಕೋಸಲಾಧಿಪತಿಯ ಮಗಳಿಗೂ ಪ್ರೇಮವಂಕುರಿಸಿದುದರಿಂದ, ಕೋಸಲೇಶ್ವರನು ತನ್ನ ಮಗಳಾದ ವಜ್ರಾ (ವಜಿರಾ) ದೇವಿಯನ್ನು ಅಜಾತಶತ್ರುವಿಗಿತ್ತು ವಿವಾಹ ಮಾಡಿ ವಿವಾದದಲ್ಲಿದ್ದ ಗ್ರಾಮಗಳನ್ನೇ ಆಕೆಗೆ ಬಳುವಳಿಯಾಗಿ ಕೊಟ್ಟನು.

ಹೀಗೆ ಕೋಸಲದೇಶದ ಸ್ವಲ್ಪ ಭಾಗವನ್ನು ಸ್ವಾಧೀನ ಪಡಿಸಿಕೊಂಡು ಅಜಾತಶತ್ರುವು ಗಂಗೆಗೆ ಉತ್ತರದಲ್ಲಿದ್ದ ಲಿಚ್ಛವೀದೇಶದಮೇಲೆ ದಂಡೆತ್ತಿ ಹೋಗಿ ರಾಜಧಾನಿಯಾದ ವೈಶಾಲೀಪಟ್ಟಣವನ್ನು ಸ್ವಾಧೀನಪಡಿಸಿಕೊಂಡನು. ಅಜಾತ ಶತ್ರುವಿನ ತಾಯಿಯು ಲಿಚ್ಛವೀರಾಜನ ಮಗಳಾದುದರಿಂದ ಈಗ ಆತನು ಜಯಿಸಿದ ರಾಜ್ಯವು ಆತನ ಅಜ್ಜನದೋ ಸೋದರಮಾವನದೋ ಆಗಿರಬೇಕು. ಈ ದಿಗ್ವಿಜಯದಿಂದ ಆತನು ಗಂಗಾನದಿಗೂ ಹಿಮಾಲಯ ಪರ್ವತಕ್ಕೂ ನಡುವೆಯಿದ್ದ ರಾಜ್ಯದ ಹೆಚ್ಚಿನ ಭಾಗವನ್ನು ಸಂಪಾದಿಸಿ ಮಗಧ ಸಾಮ್ರಾಜ್ಯದ ವೈಭವವನ್ನು ಹೆಚ್ಚಿಸಿದನು. ಅಜಾತಶತ್ರುವು ಕ್ರಿ. ಪೂ. ೪೭೫ರ ಸುಮಾರಿಗೆ ಕಾಲಧರ್ಮವನ್ನು ಹೊಂದಿರಬಹುದು. ಆತನ ಮೊಮ್ಮಗನು ಉದಯನು. ಉದಯನ ಕಾಲವು ಕ್ರಿ. ಪೂ. ೪೫೦. ಈತನೇ ಪಾಟಲೀಪುತ್ರ ಪಟ್ಟಣವನ್ನು ಕಟ್ಟಿಸಿದನೆಂದು ಹೇಳುವರು. ಈತನ ತರುವಾಯ ನಂದಿವರ್ಧನ, ಮಹಾನಂದಿ, ಎಂಬಿಬ್ಬರು ರಾಜರುಗಳು ಆಳಿದರು.

ಮಹಾನಂದಿಯೊಡನೆ ಕ್ಷತ್ರಿಯ ಕುಲವು ನಶಿಸಿತೆಂತಲೂ, ತರುವಾಯ ರಾಜ್ಯವಾಳಿದವರೆಲ್ಲಾ ಶೂದ್ರರೆಂತಲೂ ನಮ್ಮ ಪುರಾಣಕಾರರ ಅಭಿಪ್ರಾಯವು. ಮಹಾನಂದಿಗೆ ಔರಸಸಂತಾನವಿರಲಿಲ್ಲ. ಮಹಾಪದ್ಮನೆಂಬ ದಾಸೀಪುತ್ರನೊಬ್ಬನು ಮಾತ್ರ ಇದ್ದನು. ಈ ಕಾರಣದಿಂದ ಮಹಾನಂದಿಯ ತರುವಾಯ ಮಹಾಪದ್ಮನೇ ಮಗಧ ರಾಜ್ಯಕ್ಕೆ ಚಕ್ರವರ್ತಿಯಾದನು.

---

# ಎರಡನೆಯ ಪ್ರಕರಣ.

---

## ಚಂದ್ರಗುಪ್ತನ ಜನನ.

ಕ್ರಿ. ಪೂ. ೫೨೮ರಲ್ಲಿ ಬಿಂಬಿಸಾರನ ಪ್ರತಾಪದಿಂದ ಅಂಗದೇಶಾಕ್ರಮಣದೊಡನೆ ಪ್ರಾರಂಭವಾಗಿ ಕ್ರಿ. ಪೂ. ೩೭೧ರಲ್ಲಿ ಮಹಾಪದ್ಮನ ದಿಗ್ವಿಜಯದಿಂದ ತನ್ನ ಛತ್ರದ ಅಡಿಗೆ ದೇಶವೆಲ್ಲವೂ ಬಂದುದನ್ನು ನೋಡಿದ ಮಗಧ ಸಾಮ್ರಾಜ್ಯವು, ಕ್ರಿ ಪೂ. ೩೨೧ರಲ್ಲಿ ಚಂದ್ರಗುಪ್ತನ ಭುಜದಂಡವನ್ನಾಶ್ರಯಿಸಿತು.

ಈ ಚಂದ್ರಗುಪ್ತನ ಉತ್ಪತ್ತಿಯೂ ವೃದ್ಧಿಯೂ ತುಂಬ ಆಶ್ಚರ್ಯವನ್ನುಂಟುಮಾಡುವುವಾಗಿವೆ. ಆದರೆ ಅದನ್ನು ಕುರಿತು ಹೀಗೆಯೇ ಸರಿಯೆಂದು ನಿರ್ಧರಿಸಿ ಹೇಳುವುದು ಕಷ್ಟ. ಪುರಾಣಗಳಲ್ಲೊಂದು ರೀತಿಯಾಗಿಯೂ, ನಾಟಕ ಕಥೆಗಳಲ್ಲಿ ಮತ್ತೊಂದು ಬಗೆಯಾಗಿಯೂ, ಜೈನ ಬೌದ್ಧ ಚರಿತ್ರೆಗಳಲ್ಲಿಯೂ ಗ್ರೀಕರ ಚರಿತ್ರೆಗಳಲ್ಲಿಯೂ ಬೇರೊಂದು ವಿಧವಾಗಿಯೂ ಇರುವುದರಿಂದ ಚರಿತ್ರಕಾರರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಊಹಾಪೋಹಗಳನ್ನು ಬಳಿಯಿಸಿರುವರು. ಆದುದರಿಂದ ನಮ್ಮ ದೇಶದಲ್ಲಿ ಸಾಧಾರಣವಾಗಿ ರೂಢಿಯಲ್ಲಿರುವ ಪ್ರಣಾಳಿಕೆಯನ್ನೇ ಮೊದಲು ಬರೆಯುವೆವು. ತರುವಾಯ ಇತರರು ಬರೆದಿಟ್ಟುದನ್ನು ಅನುವಾದಿಸುವೆವು.

**“ನಂದಾಂತಂ ಕ್ಷತ್ರಿಯ ಕುಲಂ”** ಎಂಬುದಾಗಿ ಪೌರಾಣಿಕಶಾಸನವೂ ಲೋಕೋಕ್ತಿಯೂ ಇದೆ. ಇದಕ್ಕೆ ದೃಷ್ಟಾಂತವು, ಕಲಿಯುಗದಾದಿಯಲ್ಲಿ ನಂದ ನಾಮಾಂಕಿತರಾದ ಕೆಲವರು ರಾಜರಿದ್ದರು. ಅವರಲ್ಲಿ ಹೆಚ್ಚಿನ ಖ್ಯಾತಿ ಹೊಂದಿದವನು ಸರ್ವಾರ್ಥಸಿದ್ಧಿಯು. ಈತನಿಗೆ ಮಹಾಪದ್ಮನಂದನೆಂತಲೂ, ಧನನಂದನೆಂತಲೂ, ಮಹಾಬಲಿಯೆಂತಲೂ, ನಾಮಾಂತರಗಳಿವೆ. ಈತನು ನವಕೋಟಿ ಶತೇಶ್ವರನು, ಚಿರಕಾಲ ಭೂಮಿಯನ್ನಾಳಿದನು. ವಕ್ರನಾಸಿಕನೇ ಮೊದಲಾದ ಬ್ರಾಹ್ಮಣರು ಆತನಿಗೆ ಕುಲಮಂತ್ರಿಗಳಾದ್ದರು. ಇವರಲ್ಲಿ ರಾಕ್ಷಸನೆಂಬುವನು ಪರಮವಿಖ್ಯಾತನು, ದಂಡನೀತಿಪ್ರವೀಣನು. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯಗಳೆಂಬ ಷಡ್ಗುಣಗಳ ಪ್ರಭಾಗಗಳನ್ನರಿತವನು; ಶುಚಿ ಶೂರನು. ಈತನು ನಂದಮಾನ್ಯನಾಗಿ ರಾಜ್ಯಭಾರವನ್ನು ವಹಿಸಿದನು.

ಮಹಾಪದ್ಮನಂದನು ಅನೇಕ ದೇಶಗಳ ರಾಜರನ್ನು ಗೆದ್ದು ಮಹಾಶೂರನೆಂದು ಹೆಸರುಗೊಂಡನು. ಇಪ್ಪತ್ತನಾಲ್ಕು ಮಂದಿ ಇಕ್ಷ್ವಾಕುಗಳನ್ನೂ, ಇಪ್ಪತ್ತೈದು ಮಂದಿ ಪಾಂಚಾಲರನ್ನೂ, ಇಪ್ಪತ್ತನಾಲ್ಕು ಮಂದಿ ಹೈಹಯರನ್ನೂ, ಮೂವತ್ತೆರಡುಮಂದಿ ಕಾಳಿಂಗರನ್ನೂ, ಇಪ್ಪತ್ತೈದು ಮಂದಿ ಶಕರನ್ನೂ, ಇಪ್ಪತ್ತಾರು ಮಂದಿ ಕುರುಗಳನ್ನೂ, ಇಪ್ಪತ್ತೆಂಟು ಮಂದಿ ಮೈಥಿಲರನ್ನೂ, ಮೂವತ್ತೆರಡು ಮಂದಿ ಶೂರಸೇನರನ್ನೂ, ಇವನು ಓಡಿಸಿದನೆಂದು ವರ್ಣಿತವಾಗಿದೆ.

ಮಹಾಪದ್ಮನು ಬಹುಧನವಂತನು. ಈತನ ಬಳಿ ಮಹಾಪದ್ಮಸಂಖ್ಯೆಯ ಧನವಿದ್ದುದರಿಂದಲೇ ಈತನಿಗೆ ಈ ಹೆಸರು ಬಂದಿತಂತೆ. ನೂರು ಕೋಟಿಗೆ ಒಂದು ಪದ್ಮವಾಗುವುದು; ಅಂತಹ ಪದ್ಮಗಳು ಸಾವಿರವಾದರೆ ಮಹಾಪದ್ಮವಾಗುವುದು. ಈತನು ತನ್ನ ಪ್ರತಾಪದಿಂದ ವೃದ್ಧಿಗೊಳಿಸಿದ ಮಗಧರಾಷ್ಟ್ರದಿಂದ ತೆರಿಗೆ, ಕಪ್ಪ, ಕಾಣಿಕೆಗಳನ್ನು ದಯಾದಾಕ್ಷಿಣ್ಯಗಳಿಲ್ಲದೆ, ಎತ್ತಿ ಧನವನ್ನು ರಾಶಿರಾಶಿಯಾಗಿ ಸುರಿದುಕೊಂಡುದರಿಂದ ಧನನಂದನಾದನು. ತಾನು ಸಂಪಾದಿಸಿದ ಧನವನ್ನು ಈತನು ಗಂಗಾನದಿಯಲ್ಲಿ ಪಂಚಕೋಶಗಳಾಗಿ ಬೈತಿಟ್ಟನಂತೆ. ಮೇಲ್ಭಾಗದಲ್ಲಿ ಅಡ್ಡಲಾಗಿ ಕಟ್ಟೆಯನ್ನು ಕಟ್ಟಿಸಿ, ಗಂಗಾಪ್ರವಾಹವನ್ನು ತಿರುಗಿಸಿ, ಬಯಲುಬಿದ್ದ ಸ್ಥಳದಲ್ಲಿ ಐದು ಸುರಂಗಗಳನ್ನು ತೋಡಿಸಿ, ಅವುಗಳ ಬದಿಗಳನ್ನು ಕಲ್ಲುಕಟ್ಟಡದಿಂದ ಸರಿಗೊಳಿಸಿ, ಒಳಭಾಗದಲ್ಲಿ ಹಣವನ್ನು ತುಂಬಿಸಿ, ಕರಗಿಸಿ ಹುಯ್ದ ಸೀಸದಿಂದ ಅವುಗಳನ್ನು ಮುಚ್ಚಿಸಿ, ಅಡ್ಡಕಟ್ಟೆಯನ್ನು ಒಡೆದು, ಪ್ರವಾಹವನ್ನು ಎಂದಿನ ಮಾರ್ಗಕ್ಕೇ ತಿರುಗಿಸಿ, ಆ ಧನದ ಮೇಲಿಂದ ಹರಿದುಹೋಗುವಂತೆ ಮಾಡಿದನಂತೆ. ಈ ರಹಸ್ಯವು ಹೊರಬೀಳದಿರುವುದಕ್ಕಾಗಿ, ಆ ಕೆಲಸಗಳಲ್ಲಿ ನಿಯುಕ್ತರಾದ ಪರಿಜನರನ್ನೆಲ್ಲ ಸಂಹರಿಸಿದಂತೆಯೂ ಒಂದು ಕಥೆಯಿದೆ.

ಗ್ರೀಕರು ಬರೆದುದನ್ನನುಸರಿಸಿ ನೋಡಲಾಗಿ ಕ್ರಿ. ಪೂ. ೩೨೬ನೆಯ ಸಂವತ್ಸರದ ಸುಮಾರಿಗೆ, ಎಂದರೆ, ಅಲೆಗ್ಜಾಂಡರ (ಸಿಕಂದರು) ಈ ದೇಶದ ಮೇಲೆ ದಂಡೆತ್ತಿ ಬಂದಾಗ, ಮಗಧರಾಜ್ಯವು ಮಹೌನ್ನತ್ಯವನ್ನು ಹೊಂದಿದ್ದಿತು. ಆ ದೇಶದ ರಾಜನ ಹತ್ತಿರ ೨೦,೦೦೦ ಕುದುರೆಗಳೂ, ೨೦೦,೦೦೦ ಪದಾತಿ ಸೈನ್ಯವೂ ೨೦೦೦ ರಥಗಳೂ, ೪,೦೦೦ ಆನೆಗಳೂ ಇದ್ದುವು.

## ನವನಂದರು-ಮೌರ್ಯನು.

ಮಹಾಪದ್ಮನಿಗೆ ಇಳಾ ಎಂಬ ಪಟ್ಟದರಾಣಿಯು, ಮುರಾ ಎಂಬ ಬಂಗಾರದವಳೂ ಇದ್ದರು. ಇಳೆಗೆ ಎಂಟು ಮಂದಿ ಗಂಡು ಮಕ್ಕಳು ಹುಟ್ಟಿದರು. ತಂದೆ

ಯೂದ ನಂದನೂ ಇವರೂ ಸೇರಿ ನವನಂದನರೆಂದು ಪ್ರಖ್ಯಾತಿಗೊಂಡಿದ್ದರು. ಮುರೆಯಲ್ಲಿ ಹುಟ್ಟಿದವನು ಮೌರ್ಯನೆನಿಸಿಕೊಂಡನು. ಈ ಮೌರ್ಯನೇ ಚಂದ್ರ ಗುಪ್ತನೆಂದು ಕೆಲವರೂ, ಈ ಮೌರ್ಯನ ಮಗನೇ ಚಂದ್ರಗುಪ್ತನೆಂದು ಮತ್ತೆ ಕೆಲವರೂ ಬರೆದಿರುವರು. ಮೊದಲು ಪುರಾಣಕಥೆಯನ್ನನುಸರಿಸುವ.

ಮಹಾಪದ್ಮನಂದನು ದುಷ್ಟಸ್ವಭಾವದವನಾಗಿ ಪ್ರಜಾಪೀಡೆಯನ್ನುಂಟು ಮಾಡಿದುದರಿಂದ ಪ್ರಜೆಗಳ ಅಪ್ರೀತಿಗೆ ಪಾತ್ರನಾದನು. ಈತನು ಕಲಿಕಾಂಶ ನೆಂದೂ, ಶೂದ್ರಪ್ರಾಯನೆಂದೂ, ಅಧಾರ್ಮಿಕನೆಂದೂ ಪುರಾಣಗಳು ಹೇಳುತ್ತಿ ರುವುವು. ವಿಷ್ಣುಪುರಾಣ ವ್ಯಾಖ್ಯಾನದಲ್ಲಿ ಈತನನ್ನು ಏಕಚ್ಛತ್ರನು, ಏಕರಾಟ್ ಲುಬ್ಧ, ಸರ್ವಕ್ಷತ್ರಕರ್ತ, ಪರಶುರಾಮಸದೃಶನೆಂಬುದಾಗಿ ವರ್ಣಿಸಿರುವರು.

ಗ್ರೀಕರ ಲೇಖನಗಳನ್ನು ನೋಡಿದರೂ ರಾಜನಾದ ನಂದನ ಮೇಲೆ ಪ್ರಜೆಗ ಳಿಗೆ ಅಪ್ರೀತಿಯಿದ್ದಿತೆಂತಲೂ, ಆತನು ಲುಬ್ಧನೂ ವಿಷಯಲಂಪಟನೂ ಆಗಿದ್ದನೆಂ ತಲೂ ತಿಳಿಯಬರುತ್ತದೆ.

ಮತ್ತೊಂದು ಕಥೆಯಲ್ಲಿ ಹೀಗೆ ಹೇಳಿದೆ. ನಂದನಿಗೆ ಶಕಟಾಲನೆಂಬ ಪ್ರಿಯ ಮಂತ್ರಿಯಿದ್ದನು. ಒಂದು ಬಾರಿ ರಾಜನಿಗೆ ಮಂತ್ರಿಯ ಮೇಲೆ ಕೋಪ ಬಂದು, ಆತನು ಮಂತ್ರಿಯನ್ನು ನೆಲಮಾಳಿಗೆಯಲ್ಲಿ ಹಾಕಿಸಿದನು. ಅವನಿಗೆ ಜೀವಹಿಡಿದು ಕೊಂಡಿರುವುದಕ್ಕೆ ಬೇಕಾದಷ್ಟು ಮಾತ್ರ ಆಹಾರವನ್ನು ಕೊಡಿಸುತ್ತಿದ್ದನು. ಹೀಗೆ ಅವನು ಪ್ರಾಣಾವಶೇಷನಾಗಿ ಸೆರೆಯಲ್ಲಿರಲು, ವೈರಿಗಳು ಮಗಧದಮೇಲೆ ದಂಡೆತ್ತಿ ಬಂದರು. ನಂದನು ಶತ್ರುಗಳನ್ನು ಓಡಿಸಲು ಉಪಾಯವನ್ನು ಕಾಣದೆ, ಶಕಟಾ ಲನನ್ನು ಸೆರೆಯಿಂದ ಬಿಡಿಸಿ, ಆತನ ಮಂತ್ರಶಕ್ತಿಯ ಮಹಿಮೆಯಿಂದ ಶತ್ರುಗ ಳನ್ನು ತಿರಸ್ಕರಿಸಲು ಶಕ್ತನಾದನು. ಆದರೆ ಆ ಮೇಲೆ ಮಂತ್ರಿತ್ವವನ್ನು ಮಾಡ ಲೊಲ್ಲದೆ, ಶಕಟಾಲನು ಅನ್ನಸತ್ರಾಧಿಕಾರಿಯಾಗಿದ್ದುಕೊಂಡು ನಂದರಿಗೆ ಅಪಖ್ಯಾ ತಿಬರುವಂತೆ ಗುಪ್ತಾಲೋಚನೆಗಳನ್ನು ಮಾಡುತ್ತ, ಕೊನೆಗೆ, ಚಾಣಕ್ಯನ ಕೋಪ ವನ್ನು ರೇಗಿಸಿ ನಂದರನ್ನು ನಿರ್ಮೂಲ ಮಾಡಿಸಿದನಂತೆ

ನಂದನ ಅಧರ್ಮಪುತ್ರನಾದ ಮೌರ್ಯನು ಬಲಸಾಹಸಗಳಿಂದ ಹೆಸರು ಗೊಂಡನು. ಈತನಿಗೆ ಚಂದ್ರಗುಪ್ತನೇ ಮೊದಲಾದ ನೂರು ಮಂದಿ ಮಕ್ಕಳು ಹುಟ್ಟಿದರು. ಇವರು ಮಹಾ ಬಲಾಢ್ಯರು. ಮೌರ್ಯನೂ ಮೌರ್ಯನ ನೂರು ಮಂದಿ ಮಕ್ಕಳೂ ನವನಂದನರ ಸೈನ್ಯಕ್ಕೆ ಅಧಿಪತಿಗಳಾಗಿದ್ದರು. ಆದರೆ ಪುತ್ರಸಮೇತ ನಾದ ಮೌರ್ಯನು ರಾಜ್ಯವನ್ನೇ ಅಪಹರಿಸುವನೇನೋ ಎಂದು ನಂದರಿಗೆ ಅಸೂಯೆ

ಹೆಚ್ಚಿತು. ಆದುದರಿಂದ ತಮ್ಮ ಉದ್ಯಾನವನದಲ್ಲಿ ಒಂದು ಕೃತ್ರಿಮ ಶಿಲ್ಪಗೃಹವನ್ನು ನಿರ್ಮಿಸಿ ಮಂತ್ರಾಲೋಚನೆಯೆಂಬ ಸುಳ್ಳುಕಾರಣದ ಮೇಲೆ ಮೌರ್ಯರನ್ನು ಅಲ್ಲಿಗೆ ಬರಮಾಡಿ, ಅವರೆಲ್ಲರನ್ನೂ ನೆಲಮಾಳಿಗೆಯ ಗುಹೆಯಲ್ಲಿ ಸೆರೆಯಿಡಿಸಿದರು. ಚಂದ್ರಗುಪ್ತನ ಹೊರತು ಮಿಕ್ಕವರೆಲ್ಲರೂ ಅಲ್ಲಿ ನೆಲಮಾಳಿಗೆಯಲ್ಲಿಯೇ ದುರ್ಮರಣವನ್ನು ಹೊಂದಿದರು. ಚಂದ್ರಗುಪ್ತನು ಮಾತ್ರ ತಪ್ಪಿಸಿಕೊಂಡು ಅಲ್ಲಿಂದ ಹೊರಬಿದ್ದನು.

## ಚಂದ್ರಗುಪ್ತನು ಚಾಣಕ್ಯನನ್ನು ಆಶ್ರಯಿಸುವುದು.

ಆಜಾನುಬಾಹುವೂ, ರಾಜಲಕ್ಷಣ ಸಮನ್ವಿತನೂ, ಔದಾರ್ಯ, ಶೌರ್ಯ ಗಾಂಭೀರ್ಯನಿಧಿಯೂ, ವಿನಯವಾರಿಧಿಯೂ ಆದ ಆತನನ್ನು ಈರ್ಷ್ಯಾಳುಗಳಾದ ಆ ನಂದರು ತಿರುಗಿಯೂ ಕೊಲ್ಲಿಸುವುದಕ್ಕೆ ಕಪಟೋಪಾಯಗಳನ್ನು ಮಾಡಿದರು. ಉನ್ನತಪದವಿಯಲ್ಲಿಟ್ಟರೆ ಅಂತಃಕ್ಷೋಭವೂ, ಗಡಿಪಾರು ಮಾಡಿದರೆ ಬಾಹ್ಯಕ್ಷೋಭವೂ ಉಂಟಾಗುವುದೆಂದು ಹೆದರಿ, ನೀಚವೂ, ಹಾಸ್ಯಾಸ್ಪದವೂ ಆದ ಅನ್ನಸತ್ರಾಧಿಕಾರದಲ್ಲಿ ಇವನನ್ನು ನಿಯಮಿಸಿದರು. ಇಲ್ಲಿ ಇನ್ನೂ ಹಗೆತೀರಿಸುವುದಕ್ಕೆ ಸಮಯೋಪಾಯಗಳನ್ನು ಇದಿರುನೋಡುತ್ತಿದ್ದ ಚಂದ್ರಗುಪ್ತನು ಒಂದು ದಿನ ಆಗ್ರಹಾವತಾರವೆಂದೆನ್ನಲು ತಕ್ಕವನಾದ ಒಬ್ಬ ಬ್ರಾಹ್ಮಣನನ್ನು ಕಂಡನು. ಈತನು ಕಾಲಿಗೆ ತಗುಲಿದ ಒಂದು ಹುಲ್ಲುಗಡ್ಡೆಯನ್ನು ಬೇರುಸಹಿತವಾಗಿ ಕಿತ್ತು, ಸುಟ್ಟು ಉಳಿದ ಬೂದಿಯನ್ನು ನೀರಿನಲ್ಲಿ ಕರಗಿಸಿ ಕುಡಿದನು. ಅದನ್ನು ಕಂಡು ಮೌರ್ಯನು, ಇಂತಹ ಚಂಡಕೋಪಿಯೇ ನಂದನಿರ್ಮೂಲಕ್ಕೆ ತಕ್ಕವನೆಂದು ನಿರ್ಣಯಿಸಿದನು.

ಗುಪ್ತನೆಂಬ ಹೆಸರುಳ್ಳ ಆ ಬಾಲದ್ವಿಜನು ಔಶನನ ದಂಡನೀತಿಯಲ್ಲಿಯೂ, ಜ್ಯೋತಿಶ್ಶಾಸ್ತ್ರದಲ್ಲಿಯೂ ಪಾರಂಗತನು. ನೀತಿಶಾಸ್ತ್ರಪ್ರಣೇತನಾದ ಚಣಕನ ಮಗನು; ಚಾಣಕ್ಯನೆಂದು ಪ್ರಸಿದ್ಧಿಹೊಂದಿದ ಶ್ರೋತ್ರಿಯನು; ಸರ್ವ ಧರ್ಮವಿದನು; ಗುಣಾಢ್ಯನು. ಈ ಬ್ರಾಹ್ಮಣನು ವೇದಗಳೆಲ್ಲವನ್ನೂ ಸಂಪೂರ್ಣವಾಗಿ ಕಲಿತವನು; ಶಾಸ್ತ್ರಗಳೆಲ್ಲವನ್ನೂ ಓದಿದವನು; ಮುಖ್ಯವಾಗಿ ಬ್ರಹಸ್ಪತಿ, ಶುಕ್ರ, ಮೊದಲಾದವರ ದಂಡನೀತಿಗಳಲ್ಲಿ ಅತ್ಯಂತ ಪ್ರವೀಣನು; ನೈಜವಾದ ಬುದ್ಧಿಸಾಮರ್ಥ್ಯವೂ, ಸಮಯಸ್ಫೂರ್ತಿಯೂ ಇವನಲ್ಲಿ ತುಂಬಿದ್ದುವು. ತುಂಬ ಮುಂಗೋಪವೂ, ಹಿಡಿದ ಹಟವನ್ನು ಬಿಡದ ದಿಟ್ಟತನವೂ ಇವನನ್ನೇ ಆಶ್ರಯಿಸಿದ್ದುವು. ಈತನು ಒಂದುದಿನ ನಂದರ ಸತ್ರದಲ್ಲಿ ಒಂದು ಸಂದರ್ಭದಲ್ಲಿ ಬಹುಜನಮಧ್ಯದಲ್ಲಿ ಅಗ್ರಾಸನದಲ್ಲಿ ಕುಳಿತುಕೊಂಡಿದ್ದನು. ಆಗಲೇ ಅಲ್ಲಿಗೆ ನಂದರು ಬರುವ ಸಂ

ಭವವೂ ಉಂಟಾಯಿತು. ಬಂದು, ಆ ವಿಕೃತರೂಪನೂ, ಬ್ರಹ್ಮಚಾರಿಯೂ ಆದ ಬ್ರಾಹ್ಮಣನ ಪೂರ್ವೋತ್ತರಗಳನ್ನು ವಿಚಾರಿಸಿ, ನಂದರ ಹಿಂದೆ ಬಂದ ಅವರ ಮಂತ್ರಿಗಳೂ, ಕೂಡಿದ್ದ ಜನರಲ್ಲಿ ಕೆಲವರೂ ಬ್ರಾಹ್ಮಣಾಪಮಾನವು ಕೂಡದೆಂದು ಬೋಧಿಸಿದರೂ, ಆ ಮಾತುಗಳನ್ನು ಕೇಳದೆ, ಆತನನ್ನು ಗರ್ವಿಷ್ಠನೆಂದು ಭಾವಿಸಿ, ಬಂಟರನ್ನು ಕರೆದು, ಆ ಆಸನದಿಂದ ಎಳೆಯಿಸಿ ಹಾಕಿಸಿದರು. ಅಷ್ಟರಲ್ಲಿ ಆ ಚಾಣಕ್ಯನ ಜುಟ್ಟು ಬಿಚ್ಚಿಹೋಯಿತು, ಕಣ್ಣು ಕೆಂಪಾಯಿತು, ಒಡಲು ನಡುಗಿತು. ಔಡನ್ನು ಕಚ್ಚುತ್ತ, ಹಾರಿ ಹಾರಿ ಬೀಳುತ್ತ, ಅಲ್ಲಿಯ ಜನರೆಲ್ಲರೂ ಕೇಳುವಂತೆ, ಆತನು ಈ ರೀತಿ ಮಹಾಶಪಥವನ್ನು ಮಾಡಿದನು. ''ನನ್ನನ್ನು ಹೀಗೆ ಅಗ್ರಾಸನದಿಂದ ಎಳೆಯಿಸಿ ಹಾಕಿ ಬಹುಜನಸಮೂಹದಲ್ಲಿ ಅಪಮಾನಗೊಳಿಸಿದ ಓ ನಂದಾಧಮರುಗಳಿರಾ! ಹೀಗೆಯೇ ನಿಮ್ಮನ್ನೂ ನಿಮ್ಮ ಸಿಂಹಾಸನದಿಂದ ಎಳೆಯಿಸಿ ಹಾಕಿ, ನಿಮ್ಮ ಶಿರಗಳನ್ನೆಲ್ಲ ಕಡಿದು, ಆಮೇಲೆಯೇ ಈ ಜುಟ್ಟನ್ನು ಕಟ್ಟುವೆನು! ನನ್ನ ಚಾತುರ್ಯಸಾಮರ್ಥ್ಯವನ್ನು ನೋಡಬಹುದಲ್ಲವೆ!'' ಎಂದು ಧಿಕ್ಕರಿಸುತ್ತ ಕಾಲರುದ್ರನಂತೆ ಗರ್ಜಿಸಿದ ಆ ಬ್ರಾಹ್ಮಣನ ಕೋಪಾನಲವನ್ನು ಶಾಂತಿಗೊಳಿಸಲು ನಂದರು ಆವವಿಧವಾದ ಶಾಂತಿವಚನಗಳನ್ನೂ ಆಡದೆಹೋದರು. ಚಾಣಕ್ಯದ್ವೇಷದ ಫಲವನ್ನು ಬೇಗನೆ ನಂದರು ಅನುಭವಿಸಬೇಕಾಗಿ ಬಂದಿತು.

ಚಾಣಕ್ಯನ ಆಗ್ರಹಾದಿಗಳನ್ನು ಚಂದ್ರಗುಪ್ತನು ನೋಡಿದನು. ಹಾಗೆ ಪ್ರತಿಜ್ಞೆಮಾಡಿ ಹೊರಟುಹೋಗುತ್ತಿದ್ದಾಗ, ಹಿಂದಿರುಗಿ ನೋಡಲು, ತನ್ನನ್ನೇ ಹಿಂಬಾಲಿಸಿ ಬರುತಿದ್ದ ಚಂದ್ರಗುಪ್ತನನ್ನು ಕಂಡನು. ಅಷ್ಟರಲ್ಲಿ ಚಂದ್ರಗುಪ್ತನು ಬೇಗನೆ ಹೋಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಆತನು, ಇವನನ್ನು ಎಬ್ಬಿಸಿ ಕುಶಲ ಪ್ರಶ್ನೆಗಳನ್ನು ಮಾಡಲು, ಆತನೊಡನೆ ಚಂದ್ರಗುಪ್ತನು ತನಗೂ ನಂದರಿಗೂ ಇದ್ದ ವಿರೋಧವನ್ನು ವಿಶದಗೊಳಿಸಿ ಶರಣಾಗತನಾದನು. ಕೂಡಲೇ ಚಾಣಕ್ಯನು ಆತನನ್ನು ಸಮಾಧಾನಗೊಳಿಸಿ ಸರ್ವ ನಂದರಾಜ್ಯಕ್ಕೂ ಪಟ್ಟಾಭಿಷೇಕವನ್ನು ಆತನಿಗೆ ಮಾಡುವಂತೆ ಎರಡನೆಯ ಪ್ರತಿಜ್ಞೆಯನ್ನು ಮಾಡಿದನು. ಮೌರ್ಯ ಚಂದ್ರಗುಪ್ತನನ್ನು ತನ್ನ ಆಶ್ರಿತನನ್ನಾಗಿ ಮಾಡಿಕೊಂಡು, ಆ ಕುಟಿಲನು ನಂದಕುಲ ನಿರ್ಮೂಲನೋಪಾಯವನ್ನು ಯೋಚಿಸಿದನು. ತನ್ನ ಮಿತ್ರನಾದ ಇಂದುಶರ್ಮನಿಗೆ ಕ್ಷಪಣಕವೇಷವನ್ನು ಹಾಕಿಸಿ, ಆತನ ಆಭಿಚಾರಿಕಕೃತ್ಯಗಳಿಂದ ರಾಕ್ಷಸಾದಿಗಳನ್ನು ವಂಚಿಸುತ್ತ, ನಂದರಾಜ್ಯದ ಅರ್ಧವನ್ನು ಬಹುಮತಿಯಾಗಿ ಕೊಡುವಂತೆ ಮಹಾಬಲಿಷ್ಠನಾದ ಪರ್ವತೇಂದ್ರನಿಗೆ ವಾಗ್ದಾನಮಾಡಿ ಆತನನ್ನು ಸಹಾಯುವಾಗಿಟ್ಟುಕೊಂಡು ಮ್ಲೇಚ್ಛಬಲಗಳೊಡನೆ ಕುಸುಮಪುರಿಯನ್ನು ಮುತ್ತಿದ

ನು. ನಂದರೂ ಸಂರಬ್ಧರಾಗಿಯೂ, ಮಂತ್ರಿರಾಕ್ಷಸನ ವೀರತ್ವಕ್ಕೆ ತೃಪ್ತರಾಗಿಯೂ ಯುದ್ಧಕ್ಕೆ ಇದಿರುನಿಂತರು. ಅನೇಕ ವಿಧದಿಂದ ಪ್ರಯತ್ನಿಸಿಯೂ, ಆ ಸೈನ್ಯಗಳನ್ನು ಜಯಿಸಲಾಗದೆ ರಾಕ್ಷಸನು ಮೋಸದಿಂದ ಚಂದ್ರಗುಪ್ತನನ್ನು ಸಂಹರಿಸಲು ಪ್ರಯತ್ನಪಟ್ಟನು. ಆದರೂ ನಂದರೆಲ್ಲರೂ ಪರ್ವತೇಂದ್ರನ ಬಲಾನಿಲದಿಂದ ವೃದ್ಧಿಹೊಂದಿದ ಚಾಣಕ್ಯನ ಕೋಪವೆಂಬ ಬೆಂಕಿಯಲ್ಲಿ ಮಿಡಿತೆಗಳಂತೆ ಸುಟ್ಟುಹೋದರು. ಸೇನೆಯೆಲ್ಲವೂ ಹಗೆಯ ಕೈ ಸೇರಿತು. ಈ ಕಾರಣದಿಂದ ಅಮಾತ್ಯರಾಕ್ಷಸನ ಬಲವು ಕುಗ್ಗಿತು. ಆತನು ಬಳಲಿ ಬೆಂಡಾಗಿ ಪೌರುಷಹೀನನೂ ದೈವವಿಮುಖನೂ, ಬಲಹೀನನೂ ಎನಿಸಿ ಹೇಗಾದರೂ ಪ್ರಾಣವನ್ನು ಉಳಿಸಿಕೊಂಡರೆ ಸಾಕೆಂಬುದಾಗಿ ತಿಳಿದು ನಂದವೃದ್ಧನಾದ ಸರ್ವಾರ್ಥಸಿದ್ಧಿಯನ್ನು ಸುರಂಗಮಾರ್ಗವಾಗಿ ಪುರದಿಂದ ಹೊರಕ್ಕೆ ಕಳುಹಿಸಿ, ನಂದಪಕ್ಷಪಾತಿಗಳಾದ ಪುರಜನರೊಡನೆ ರಾಜಧಾನಿಯನ್ನು ಮೌರ್ಯನ ವಶಮಾಡಿದನು.

## ಬೌದ್ಧಗ್ರಂಥಗಳೊಳಗಣ ಕಥೆ.

ಬೌದ್ಧರು ಹೀಗೆ ಹೇಳುವರು: ಚಂದ್ರಗುಪ್ತನು ಶಾಕ್ಯವಂಶಸಂಭೂತನು. ಆದುದರಿಂದ ಈತನು, ಶಾಕ್ಯಸಿಂಹನೆಂಬುದಾಗಿ ಪ್ರಖ್ಯಾತಿಗೊಂಡ ಗೌತಮಬುದ್ಧನಂತೆಯೇ ಕ್ಷತ್ರಿಯ ಕುಲಸ್ಥನು. ಆತನ ತಂದೆಯು ಮಯೂರದೇಶಾಧಿಪನು. ಆ ರಾಜನು ಆಳುತ್ತಿರುವಾಗ ಹಗೆಗಳು ಆತನ ದೇಶದ ಮೇಲೆ ದಂಡೆತ್ತಿಹೋಗಿ ಯುದ್ಧದಲ್ಲಿ ಅವನನ್ನು ಓಡಿಸಿ, ಸಂಹರಿಸಿದರು. ಅಂತಹ ವಿಪತ್ಕಾಲದಲ್ಲಿ ನಮ್ಮ ಚಂದ್ರಗುಪ್ತನನ್ನು ಗರ್ಭದಲ್ಲಿ ಧರಿಸಿದ್ದ ಮಯೂರರಾಣಿಯು ದನಗಳ ಒಂದು ಕೊಟ್ಟಿಗೆಯ ಹತ್ತಿರ ಆ ಮಗುವನ್ನು ಹೆತ್ತು ಬಿಟ್ಟುಹೋದಳು. ಅಷ್ಟರಲ್ಲಿ ಒಬ್ಬ ಗೊಲ್ಲನು ಬಂದು, ಆ ಮಗುವನ್ನು ಸಾಕಿ, ತಾನು ಪಾಟಲೀಪುರದಿಂದ ಹೊರಡುವ ಸಂದರ್ಭವು ದೊರೆತಾಗ ಅದನ್ನು ಅಲ್ಲಿಯೇ ತಕ್ಷಶಿಲೆಯ ಬ್ರಾಹ್ಮಣನಾದ ಚಾಣಕ್ಯನಿಗೆ ಮಾರಿಬಿಟ್ಟನಂತೆ. ಧನನಂದನು ಚಾಣಕ್ಯನನ್ನು ಅವಮಾನಗೊಳಿಸಿದುದರಿಂದ ಆತನು ಚಂದ್ರಗುಪ್ತನನ್ನು ನಿಮಿತ್ತವಾಗಿಟ್ಟುಕೊಂಡು ಹಗೆ ತೀರಿಸಿಕೊಂಡನಂತೆ.

ಮತ್ತೂ ಒಂದು ವೃತ್ತಾಂತವು ಹೀಗಿರುವುದು. ಮೋರಿಯ ಎಂದರೆ ಮಯೂರನಗರದ ರಾಣಿಯು ತನ್ನ ಗಂಡನು ಯುದ್ಧದಲ್ಲಿ ಸಂಹೃತನಾದೊಡನೆ, ಗರ್ಭಾರ್ಭಕನನ್ನು ಕಾಪಾಡುವುದಕ್ಕಾಗಿ, ತನ್ನ ಅಣ್ಣನನ್ನು ಸಂಗಡ ಕರೆದುಕೊಂಡು ಪುಷ್ಪಪುರಿಗೆ ಓಡಿಹೋದಳಂತೆ. ಅಲ್ಲಿ ಮಾರುವೇಷವನ್ನು ಧರಿಸಿ ಜೀವಿಸಿಕೊಂಡಿರು

ತ್ತ ಮಗನನ್ನು ಪಡೆದಳು. ದೇವತೆಗಳೇ ರಕ್ಷಿಸಲಿ! ಎಂದು ಆ ಶಿಶುವನ್ನು ಒಂದು ಕಂಬಳಿಯಲ್ಲಿ ಸುತ್ತಿ ದನಕರುಗಳ ಕೊಟ್ಟಿಗೆಯ ಹತ್ತಿರ ಇರಿಸಿಹೋದಳು. ಆಗ ಚಂಡನೆಂಬ ಒಂದು ಎತ್ತು ಕಂಬಳಿಯ ಹತ್ತಿರ ನಿಂತು ಮಗುವನ್ನು ಕಾಪಾಡುತ್ತಿದ್ದುದರಿಂದ ಅಲ್ಲಿಯ ದನಕಾಯುವವನು ಅವನಿಗೆ ಚಂಡಗುಪ್ತನೆಂಬ ಹೆಸರಿಟ್ಟು ಕಾಪಾಡಿದನು. ಚಂಡಗುಪ್ತನೆಂಬ ಹೆಸರು ಚಂದ್ರಗುಪ್ತನೆಂಬ ಹೆಸರಾಗಿ ಮಾರ್ಪಾಡುಹೊಂದಿತಂತೆ. ಮೋರೀಯರು ಪಿಪ್ಪಿಲೀವನದ ಹತ್ತಿರವಿರುವವರೆಂದು ಬೌದ್ಧಜೈನರ ವಾರ್ತೆಯಾಗಿರುವುದು. ಸ್ವಾಟ್ ಎಂಬ ಹಳುವುಸೀಮೆಯಲ್ಲಿ ಇಂದಿಗೂ "ಮೊರಾ" ಎಂಬ ಒಂದು ಕಣಿವೆಯಿದೆ ಎಂದು ವಾಡ್ಡೆಲ್‌ರವರು ಹೇಳಿ, ಈ ಹೆಸರು ಚಂದ್ರಗುಪ್ತನ ಔತ್ತರಜನ್ಮವನ್ನು ಸೂಚಿಸುತ್ತಿರುವುದೆಂದು ಅಭಿಪ್ರಾಯಪಡುವರು.

ಬೌದ್ಧಚರಿತ್ರೆಗಳು ಗ್ರೀಕು ಇತಿಹಾಸಗಳೊಡನೆ ಅಧಿಕ ಸಾಮರಸ್ಯವನ್ನು ಹೊಂದಿವೆ. ಮುಖ್ಯಾಂಶಗಳ ಕಥನದಲ್ಲಿ ವ್ಯತ್ಯಾಸಗಳು ತೋರುವುದಿಲ್ಲ. ಇನ್ನೂ ಕೆಲವು ಬೌದ್ಧಗ್ರಂಥಗಳಲ್ಲಿ ಹೀಗೆ ಹೇಳಿದೆ:—

ಚಾಣಕ್ಯನು ಗೊಲ್ಲನಿಗೆ ಕ್ರಯವಿತ್ತು ಚಂದ್ರಗುಪ್ತನನ್ನು ಕೊಂಡುಕೊಂಡು ಆತನಿಗೆ ಯುಕ್ತವಾದ ಕ್ಷಾತ್ರವಿದ್ಯಾಭ್ಯಾಸವನ್ನು ಮಾಡಿಸಿದನು. ಚಂದ್ರಗುಪ್ತನು ಯೌವನವನ್ನು ಹೊಂದುತ್ತಲೇ ತನ್ನ ಹತ್ತಿರ ರಹಸ್ಯವಾಗಿ ವೇತನವನ್ನು ಕೊಟ್ಟು ಇಟ್ಟುಕೊಂಡಿದ್ದ ಸೇನೆಯನ್ನು ಆತನ ವಶಮಾಡಲು, ಆತನು ಪಾಟಲೀಪುರದ ಮೇಲೆ ದಂಡೆತ್ತಿಹೋದನು. ಆದರೆ ಈ ಅಭಿಯೋಗವು ವ್ಯರ್ಥವಾಯಿತು. ಹೀಗಾಗಿ ಚಂದ್ರಗುಪ್ತನು ಪಂಜಾಬಿಗೆ ಓಡಿಹೋದನು.

ಇನ್ನೂ ಒಂದು ಕಥೆಯಿದೆ. ಚಾಣಕ್ಯನು ಕೈಯಲ್ಲಿದ್ದ ಗುಪ್ತಧನದಿಂದ ಸೇನೆಯನ್ನು ಕೂಡಿಸಿಕೊಂಡು ನಂದನಮೇಲೆ ಯುದ್ಧಕ್ಕೆ ಹೋಗಲಾಗಿ, ಮೊದಲು ಅಪಜಯವನ್ನು ಹೊಂದಿದನು. ಆಗ ಚಂದ್ರಗುಪ್ತನನ್ನು ಕರೆದು: "ಯುದ್ಧದಿಂದ ಲಾಭವಿಲ್ಲ. ಗುಪ್ತಚಾರರಾಗಿ ಜನರ ಅಭಿಪ್ರಾಯಗಳನ್ನು ಮೊದಲು ತಿಳಿದುಕೊಳ್ಳೋಣ"—ಎಂದು ಹೇಳಿ ಅವರಿಬ್ಬರೂ ಗ್ರಾಮಗಳಲ್ಲಿ ಗುಪ್ತಚಾರರಾಗಿ ತಿರುಗುತ್ತಿದ್ದರು. ಒಂದು ದಿನ ಒಬ್ಬ ಹುಡುಗನು, ತಾಯಿಯು ತನಗೊಂದು ರೊಟ್ಟಿಯನ್ನು ಕೊಡಲು, ಅದರ ನಡುಭಾಗವನ್ನು ಮಾತ್ರ ತಿಂದು ಸುತ್ತಲಿರುವ ಭಾಗವನ್ನು ಬಿಟ್ಟು, ಮತ್ತೊಂದು ರೊಟ್ಟಿಯನ್ನು ಕೊಡೆಂದು ಕೇಳಲು, ತಾಯಿಯು: "ಎಲೋ ಹುಚ್ಚಾ! ಸುತ್ತಲಿರುವ ರಾಜ್ಯವನ್ನು ಮೊದಲು ವಶಮಾಡಿಕೊಳ್ಳದೆ ಮೊತ್ತಮೊ

ದಲು ರಾಜಧಾನಿಯ ಮೇಲೆಯೇ ದಂಡೆತ್ತಿಬಂದು ಓಡಿಹೋದ ಚಂದ್ರಗುಪ್ತನಂತೆ ರೊಟ್ಟಿಯನ್ನು ತಿಂದೆಯಲ್ಲವೇ''—ಎಂದು ಅಣಕಿಸಿದಳು. ಸಮೀಪಪ್ರದೇಶವಲ್ಲಿಯೇ ಮಾರುವೇಷದಿಂದಿದ್ದ ಚಂದ್ರಗುಪ್ತನು ಆ ಮಾತುಗಳನ್ನು ಕೇಳಿ, ಮೊದಲು ಸಾಮಂತರಾಜರನ್ನು ವಶಪಡಿಸಿಕೊಳ್ಳುವುದಕ್ಕಾಗಿ ಯತ್ನಮಾಡಿದನು, ಮತ್ತು ಒಬ್ಬ ಬೆಸ್ತರವನಿಗೆ ಲಂಚವಿತ್ತು ಗಂಗಾನದಿಯ ಪ್ರವಾಹದಲ್ಲಿ ಅಡಗಿಸಿಟ್ಟಿದ್ದ ಪಂಚನಿಧಿಗಳನ್ನು ಸಂಪಾದಿಸಿದನು.

## ಮಾಕ್ಸ್‌ಮುಲ್ಲರವರ ಕಥೆ.

ಉತ್ತರವಿಹಾರದ ಸನ್ಯಾಸಿಗಳ ಕಥೆಗಳಿಂದ ತೆಗೆದು ಮಾಕ್ಸ್‌ಮುಲ್ಲರವರು ತಮ್ಮ ಸಂಸ್ಕೃತಗ್ರಂಥಾವಳಿಯ ಚರಿತ್ರದಲ್ಲಿ ಈ ರೀತಿ ಉದಾಹರಿಸಿರುವರು; ತಕ್ಷಶಿಲಾವಾಸಿಯಾದ ಬ್ರಾಹ್ಮಣನೊಬ್ಬನಿದ್ದನು. ಆತನ ಹೆಸರು ಚಾಣಕ್ಯ. ಪಾಟಲೀಪುರದಲ್ಲಿದ್ದ ಈ ಚಾಣಕ್ಯನು ಹೇಗೋ ನಂದನ ಆಗ್ರಹಕ್ಕೆ ಗುರಿಯಾದನು. ಆಗ ನಂದನು ಭಟರನ್ನು ಕರೆಯಿಸಿ ಆತನನ್ನು ಹಿಡಿದುಕೊಳ್ಳುವಂತೆ ಆಜ್ಞೆಯಿತ್ತನು. ಅಷ್ಟರಲ್ಲಿ ಚಾಣಕ್ಯನು ಸಮಯಸ್ಫೂರ್ತಿಯಿಂದ ಕೂಡಲೇ ತನ್ನ ಉಟ್ಟಬಟ್ಟೆಯನ್ನು ಸಡಲಿಸಿ ಬಿಸುಟು, ನಗ್ನನಾಗಿ ಅಜೀವಕ ವೇಷವನ್ನು ಕೈಕೊಂಡು, ತಪ್ಪಿಸಿಕೊಂಡುಹೋಗಿ ನಗರದಲ್ಲಿ ವಿಜನವಾಗಿದ್ದ ಸಂಭಾರಸ್ಥಾನದಲ್ಲಿ ಅಡಗಿದ್ದು ಸ್ವಲ್ಪ ಹೊತ್ತಿನ ಮೇಲೆ ಪರ್ವತರಾಜಕುಮಾರನ ಪರಿವಾರವನ್ನು ಸಂಧಿಸಿ ವಿಂಧ್ಯವನ್ನು ಸೇರಿದನು. ವೃಷಭರಕ್ಷಿತನಾದ ಚಂದ್ರಗುಪ್ತನು ಅಲ್ಲಿ ಹಸುಗಳನ್ನು ಮೇಯಿಸುತ್ತಿದ್ದನು. ಆ ಹುಡುಗನ ಶುಭಲಕ್ಷಣಗಳನ್ನು ನೋಡಿ, ದನಕಾಯುವವನಿಗೆ ಒಂದು ಸಾವಿರ ಕಾಹಪಣಗಳನ್ನು ಸಲ್ಲಿಸಿ ಚಾಣಕ್ಯನು ಆ ಹುಡುಗನನ್ನು ಬೆಲೆಗೆ ಕೊಂಡು, ಅವನ ಕತ್ತಿಗೆ ಲಕ್ಷಬೆಲೆಯುಳ್ಳ ಭಂಗಾರದ ಕುಂಡಲಗಳನ್ನು ಮುಚ್ಚಿ ಇದ್ದ ಒಂದು ಕಂಬಳಿಯದಾರವನ್ನು ಕಟ್ಟಿದನು. ಒಂದು ದಿನ ಆ ಬಾಲಕರಿಬ್ಬರೂ ವಿಚಿತ್ರವಾದ ಕನಸನ್ನು ಕಂಡರಂತೆ. ಅಷ್ಟರಲ್ಲಿ ಆ ಬ್ರಾಹ್ಮಣನು ಪಾರ್ವತನನ್ನು ಕರೆದು ನಿದ್ರಿಸುತ್ತಿದ್ದ ಚಂದ್ರಗುಪ್ತನ ಕತ್ತಿನ ದಾರವನ್ನು ಕತ್ತರಿಸದೆಯೂ ಎಳೆಯದೆಯೂ, ಆತನನ್ನು ಎಚ್ಚರಿಸದೆಯೂ ತಾರೆಂದು ಹೇಳಲು ಪಾರ್ವತನು ಕಯ್ಯಲಾಗದೆ ಬಂದನು. ಮರುದಿನ ಪಾರ್ವತನು ನಿದ್ದೆಹೋಗುವಾಗ ಚಂದ್ರಗುಪ್ತನನ್ನು ಕರೆದು ಅದರಂತೆಯೇ ಆಜ್ಞೆಮಾಡಲು, ಅವನು ಕಯ್ಯ ಕತ್ತಿಯಿಂದ ಪಾರ್ವತನ ಶಿರವನ್ನು ಕತ್ತರಿಸಿ ದಾರವನ್ನು ತಂದು ಸಮರ್ಪಿಸಿದನಂತೆ, ಅದನ್ನು ನೋಡಿ ಚಂದ್ರಗುಪ್ತನನ್ನು ಯೋಗಪುರುಷನೆಂದು ನಿರ್ಣಯಿಸಿ, ಅಂದಿನಿಂದ ಏಳು ವರ್ಷಗಳಲ್ಲಿ ಸಮಸ್ತವಿದ್ಯಾವಿಶಾರದನನ್ನಾಗಿ ಮಾಡಿದನು.

## ಗ್ರೀಕರ ಲೇಖನಗಳು.

ಚಂದ್ರಗುಪ್ತನು ಚಿಕ್ಕ ವಯಸ್ಸಿನಲ್ಲಿಯೇ ಮಗಧರಾಜನ ಕೋಪಕ್ಕೆ ಪಾತ್ರನಾಗಿ ಪಾಟಲೀಪುರದಿಂದ ತಕ್ಷಶಿಲಾಪ್ರದೇಶಕ್ಕೆ, ಎಂದರೆ ಪಂಜಾಬುದೇಶಕ್ಕೆ ಓಡಿಹೋಗಿ ಅಲ್ಲಿ ಸೈನ್ಯವನ್ನು ಕೂಡಿಕೊಂಡು, ಅದುವರೆಗೂ ರಾಜ್ಯವಾಳುತ್ತಿದ್ದ ಗ್ರೀಕರನ್ನು ಓಡಿಸಿ, ಬಳಿಕ ನಂದರನ್ನು ಸಂಹರಿಸಿ ಮಗಧರಾಜ್ಯವನ್ನು ಸ್ವಾಧೀನಪಡಿಸಿಕೊಂಡನು.

## ಕಥಾನಕಗಳ ಸಮನ್ವಯವು.

ಹೀಗೆ ಚಂದ್ರಗುಪ್ತನ ಜನನವನ್ನು ಕುರಿತು—ಸರ್ವಾರ್ಥಸಿದ್ಧಿಯ ಮೊಮ್ಮಗನೆಂದು ಒಂದು ಕಥೆ; ಧನನಂದನಿಗೆ ಮುರೆಯಲ್ಲಿ ಹುಟ್ಟಿದವನೆಂದು ಮತ್ತೊಂದುಕಥೆ; ಮಯೂರದೇಶದ ರಾಣಿಯಲ್ಲಿ ಹುಟ್ಟಿ ಚಾಣಕ್ಯನಿಂದ ಕ್ರಯಕ್ರೀತ ನೆಂದು ಬೇರೊಂದುಕಥೆ; ಆ ರಾಣಿಯು ಹೆತ್ತು, ಹಸುಗಳ ಕೊಟ್ಟಿಗೆಯಲ್ಲಿಟ್ಟುಹೋಗಲು, ಗೊಲ್ಲರವನು ಕಾಪಾಡಿ ಚಾಣಕ್ಯನಿಗೆ ಮಾರಿದ ಶಿಶುವೆಂದು ಇನ್ನೊಂದು ಕಥೆ; ಮೋರಿ ಎಂಬ ರಾಣಿಯು ಮಾರುವೇಷದಿಂದ ಪುಷ್ಪಪುರದಲ್ಲಿ ಮಗುವನ್ನು ಹೆತ್ತು ಕಂಬಳಿಯಲ್ಲಿ ಸುತ್ತಿಡಲು, ಚಂಡನೆಂಬ ಎತ್ತು ಸಂರಕ್ಷಿಸಿದುದರಿಂದ, ದನಕಾಯುವವನಿಂದ ಚಂಡಗುಪ್ತನೆಂಬ ಹೆಸರನ್ನು ಹೊಂದಿದ ಬಾಲಕನೆಂದು ಐದನೆಯ ಕಥೆ, ಪರ್ವತರಾಜಪುತ್ರನೊಡನೆ ಪಾಟಲೀಪುರವನ್ನು ಬಿಟ್ಟು ಹೋಗಿ, ವಿಂಧ್ಯಪ್ರಾಂತದ ಒಂದು ಗೊಲ್ಲರ ಪಾಳಯದಲ್ಲಿ ತೇಜಸ್ವಿಯಾದ ಬಾಲಚಂದ್ರಗುಪ್ತನು ಸರಿಪ್ರಾಯದ ಗೋಪಾಲಬಾಲರೊಡನೆ ರಾಜಮಂತ್ರಿಗಳಾಟವಾಡುತ್ತಲಿದ್ದಲ್ಲಿ, ಅವನು ಕುಲೀನಸಂಭವನೆಂದು ಚಾಣಕ್ಯನು ಊಹಿಸಿ, ಆ ಬಾಲಕನನ್ನು ಬೆಲೆಗೆ ಕೊಂಡುಕೊಂಡನೆಂಬುದು ಆರನೆಯಕಥೆ. ಹೀಗಾದುದರಿಂದ ಆತನು ಇಂತಹ ಕುಲದಲ್ಲಿಯೇ ಹುಟ್ಟಿದವನೆಂದು ನಿರ್ಣಯಿಸುವುದು ಹೆಚ್ಚುಕಡಿಮೆ ಅಶಕ್ಯವೇ ಸರಿ. ಮುದ್ರಾರಾಕ್ಷಸದಲ್ಲಿ ಆತನು ವೃಷಲನೆಂದು ಎಣಿಸಲ್ಪಟ್ಟಿರುವನು. ಚಾಣಕ್ಯನು ಆತನನ್ನು ಹಿಂದಣಿಂದ ವೃಷಲನೆಂದು ಹೇಳುವನು. ಇದಿರಲ್ಲಿಯೂ ವೃಷಲನೆನ್ನುತ್ತಿರುವನು. ಜಾತಿವಿವೇಕದಲ್ಲಿ ವೃಷಲನೆಂದರೆ ನಾಪಿತನಿಗೆ ಶೂದ್ರಿಯಲ್ಲಿ ಹುಟ್ಟಿದವನೆಂದು ವಿವರಣೆ. ಮಹಾನಂದಿಯೆಂಬ ಶೈಶುನಾಗರ ಕೊನೆಯ ರಾಜನಿಗೆ ಶೂದ್ರಿಯಲ್ಲಿ ಮಹಾಪದ್ಮನು ಉದಯಿಸಿದನೆಂಬುದು ಪುರಾಣಪ್ರಸಿದ್ಧವು. ಪ್ಲೂಟಾರ್ಕನ ಮೂಲವಾಗಿ ಮಹಾನಂದಿಯು ನಾಪಿತನೆಂದು ಗೊತ್ತಾಗುತ್ತದೆ. ಆದುದರಿಂದ ಮಹಾಪದ್ಮನಂದನೇ ವೃಷಲನಾದನು. ಆತನ ಮಗನೂ ವೃಷಲನೆಂದರೆ, ಚಂದ್ರಗುಪ್ತನೇ ಅಲ್ಲದೆ, ನಂದರೂ ವೃಷಲರಾದರು. ಮಿಕ್ಕ ಕಥೆಗಳೆಲ್ಲ

ಚಂದ್ರಗುಪ್ತನನ್ನು ಕ್ಷತ್ರಿಯನೆಂದು ಹೇಳುತ್ತವೆ. ಮುದ್ರಾರಾಕ್ಷಸದಲ್ಲಿ ವಿಷ್ಣುಗುಪ್ತ ವಿರಾಧಗುಪ್ತರು ಬ್ರಾಹ್ಮಣರು; ಬಲಗುಪ್ತನು ಕ್ಷತ್ರಿಯನು. ಆದುದರಿಂದ ಚಂದ್ರಗುಪ್ತನಾರು? ಅನಂತರದ ಕಾಲಗಳಲ್ಲಿ ಗುಪ್ತ ಎಂಬ ಹೆಸರು ವೈಶ್ಯರ ಬಿರುದಾಯಿತು.

ಇವಿಷ್ಟು ಕಥೆಗಳನ್ನೂ ಆಲೋಚಿಸಿ ನೋಡಿದಲ್ಲಿ, ಚಂದ್ರಗುಪ್ತನು ಮುರೆಯೆಂಬ ಸ್ತ್ರೀಯ ಕುಮಾರನೆಂತಲೂ, ಚಿಕ್ಕಂದಿನಲ್ಲಿಯೇ ಶತ್ರುಗಳಿಂದ ಪೀಡಿತನಾಗಿ ಸ್ವಗ್ರಾಮವನ್ನು ಬಿಟ್ಟು ದೂರದೇಶಕ್ಕೆ ಓಡಿಹೋದನೆಂದೂ, ಅಲ್ಲಿ ಚಾಣಕ್ಯನೆಂಬ ಬ್ರಾಹ್ಮಣನನ್ನು ಆಶ್ರಯಿಸಿ ಆತನ ಕುಟಿಲನೀತಿಸಹಾಯದಿಂದ ನಂದರನ್ನು ಸಂಹರಿಸಿ ರಾಜ್ಯವನ್ನು ಸಂಪಾದಿಸಿದನೆಂತಲೂ ಕಾಣಬರುತ್ತದೆ. ಚಂದ್ರಗುಪ್ತನು ಮೊದಲು ನಂದರನ್ನು ಸಂಹರಿಸಿ ಮಗಧವನ್ನು ಆಕ್ರಮಿಸಿಕೊಂಡನೋ? ಇಲ್ಲವೆ, ಗ್ರೀಕರನ್ನು ಓಡಿಸಿ ಪಂಜಾಬನ್ನು ವಶಮಾಡಿಕೊಂಡನೋ? ಎಂಬುದಾಗಿ ನಿಶ್ಚಯವಾಗಿ ಹೇಳುವುದಕ್ಕೆ ಚರಿತ್ರಸಾಧನಗಳಾವುವೂ ಇಲ್ಲ. ಆತನ ಜೀವಿತದಲ್ಲಿ ಅವನು ಮಾಡಿದ ಮುಖ್ಯ ದಿಗ್ವಿಜಯಗಳು ಎರಡು—ಒಂದು ಮಗಧವನ್ನಾಕ್ರಮಿಸಿದುದು; ಎರಡನೆಯದು ಗ್ರೀಕರನ್ನೋಡಿಸಿದುದು. ಮೊದಲನೆಯದು ನಮ್ಮ ಪುರಾಣಾದಿಗಳಲ್ಲಿ, ಮುಖ್ಯವಾಗಿ ಮುದ್ರಾರಾಕ್ಷಸವೆಂಬ ನಾಟಕದಲ್ಲಿ ವರ್ಣಿಸಲ್ಪಟ್ಟಿದೆ. ಎರಡನೆಯ ಸಂಗತಿಯಾದ ಗ್ರೀಕರ ಪರಾಭವವನ್ನು ಕುರಿತ ಚರಿತ್ರೆಯನ್ನು ಅವರ ಗ್ರಂಥಗಳ ಮೂಲಕವೇ ತಿಳಿದುಕೊಳ್ಳಬೇಕಾಗಿದೆ. ಈ ಚರಿತ್ರಾಂಶಗಳು ಬೇರೆಬೇರೆಯಾಗಿ ಎರಡು ಪ್ರಕರಣಗಳಲ್ಲಿ ಸಂಗ್ರಹಿಸಲ್ಪಡುವುವು.

---

# ಮೂರನೆಯ ಪ್ರಕರಣ.

## ಮಗಧರಾಜ್ಯವನ್ನು ಆಕ್ರಮಿಸುವುದು.

ಮಹಾಪದ್ಮನಂದನ ವಾರ್ಧಕದಲ್ಲಿ ರಾಜಕಾರ್ಯಗಳೆಲ್ಲವನ್ನೂ ಆತನ ಎಂಟುಮಂದಿ ಮಕ್ಕಳೇ ನೋಡಿಕೊಳ್ಳುತ್ತಿದ್ದರು. ಅವರು ಗರ್ವಾಂಧರು. ಮಂತ್ರಿಶ್ರೇಷ್ಠನೂ, ಅನನ್ಯಸಾಮಾನ್ಯ ಸ್ವಾಮಿಭಕ್ತಿಭೂಷಿತನೂ, ಆದ ಅಮಾತ್ಯ ರಾಕ್ಷಸನ ಬೋಧೆಗಳನ್ನು ಕೇಳದೆ, ಅವರು ಚಾಣಕ್ಯನೆಂಬ ಬ್ರಾಹ್ಮಣನನ್ನು ತಿರಸ್ಕರಿಸುವುದೂ, ಆತನು ನಂದರೆಲ್ಲರನ್ನೂ ಸಂಹರಿಸುವನೆಂತಲೂ, ಚಂದ್ರಗುಪ್ತನಿಗೆ ಪಟ್ಟ

ವನ್ನು ಕಟ್ಟುವನೆಂತಲೂ ಈ ಎರಡುಕಾರ್ಯಗಳಾದಲ್ಲದೆ ಜುಟ್ಟನ್ನು ಕಟ್ಟುವುದಿಲ್ಲ ವೆಂದು ಪ್ರತಿಜ್ಞೆಮಾಡಿದುದೂ ಇದುವರೆಗೆ ಹೇಳಲ್ಪಟ್ಟಿದೆ.

ಹಾಗೆ ಎರಡು ಶಪಥಗಳನ್ನು ಮಾಡಿದ ಆ ಬ್ರಾಹ್ಮಣನು ಮೌರ್ಯನನ್ನು ತನ್ನ ಹಿಂದೆ ಕರೆದುಕೊಂಡು ಹೋದನು. ದಾರಿಯಲ್ಲಿ ಚಾಣಕ್ಯನಿಗೆ ಅತ್ಯಂತ ಸ್ನೇಹಿತ ನಾದ ಒಬ್ಬನು ವಾಸವಾಗಿದ್ದನು. ಈತನ ಹೆಸರು ಇಂದುಶರ್ಮ. ಈತನೂ ಚಾಣಕ್ಯನೂ ಒಬ್ಬ ಗುರುವಿನಲ್ಲಿಯೇ ವಿದ್ಯೆ ಕಲಿತವರು. ಇಂದುಶರ್ಮನು ಶುಕ್ರ ನೀತಿಯಲ್ಲಿಯೂ, ಜ್ಯೋತಿಶ್ಶಾಸ್ತ್ರದಲ್ಲಿಯೂ ಉದ್ದಂಡವಾದ ತಿಳಿವಳಿಕೆಯುಳ್ಳವನು. ಚಾಣಕ್ಯನು ಆತನ ಆಶ್ರಮದಲ್ಲಿ ನಿಂತು ಚಂದ್ರಗುಪ್ತನಿಗೆ ಆತಿಥ್ಯವನ್ನು ಕೊಡಿಸಿ, ಕುಶಲಪ್ರಶ್ನೆಗಳು ನಡೆಯುತ್ತಲೇ ನಂದತಿರಸ್ಕಾರಾದಿ ವಿಷಯಗಳನ್ನೆಲ್ಲ ವಿವರಿಸಿ ಆತನ ಸಹಾಯವನ್ನು ಕೋರಿದನು.

ಆ ಮೇಲೆ ಇಂದುಶರ್ಮನು ತಾನು ಕ್ಷಪಣಕವೇಷವನ್ನು ಧರಿಸಿ ನಂದಮಂತ್ರಿಗಳಿಗೆ ತನ್ನಲ್ಲಿ ಸ್ನೇಹವಿಶ್ವಾಸಗಳು ಹುಟ್ಟುವಂತೆ ನಟಿಸುತ್ತ, ಗಟ್ಟಿಗರಾಗಿ ನಂಬಿಕೆಯುಳ್ಳ ಶಿಷ್ಯರನ್ನು ಚಾರರನ್ನಾಗಿ ನಿಯಮಿಸಿ, ತನಗೆ ತಿಳಿದ ವರ್ತಮಾನಗಳನ್ನೆಲ್ಲ ಚಾಣಕ್ಯನಿಗೆ ತಿಳಿಸುತ್ತ, ದೇಶಕಾಲಪಾತ್ರಗಳಿಗೆ ತಕ್ಕಂತೆ ಕೆಲಸಗಳನ್ನು ಮಾಡುತ್ತ ಚಂದ್ರಗುಪ್ತನಿಗೆ ಸಹಾಯಮಾಡುವುದಕ್ಕೆ ಒಪ್ಪಿದನು.

## ನಂದಸಂಹಾರವು.

ಅನಂತರ ಚಾಣಕ್ಯ ಚಂದ್ರಗುಪ್ತರು ಪರ್ವತರಾಜನ ನಗರಕ್ಕೆ ಹೋದರು. ಪರ್ವತರಾಜ್ಯಕ್ಕೆ ತಕ್ಷಶಿಲೆಯು ರಾಜಧಾನಿಯೆಂದು ಕೆಲವರು ಎನ್ನುತ್ತಿರುವರು. ಆದರೂ ರಾಜನಿಗೆ ಸಿಂಹಳದೇಶಾಧಿಪನೆಂತಲೂ ಹೆಸರಿರುವುದರಿಂದ ಸೀಮಲಾ ಎಂಬ ಪುರದಲ್ಲಿ ಆತನು ಇದ್ದಿರಬಹುದು. ಚಾಣಕ್ಯನು ಪರ್ವತರಾಜನ ಸನ್ನಿಧಿಯನ್ನು ಸೇರಿ, ಚಂದ್ರಗುಪ್ತನ ಮತ್ತು ತನ್ನ ಪ್ರತಿಜ್ಞೆಗಳನ್ನು ತಿಳಿಸಿದನು. ಪರ್ವತರಾಜನಿಗೂ ಮಗಧರಾಜನಿಗೂ ಬದ್ಧವೈರವಿದ್ದಿತು. ಆದರೂ ವಂಚಕನಾಗಿ ಮಿತ್ರನಂತೆಯೇ ಅಭಿನಯಿಸುವವನೂ ದಂಡಯಾತ್ರೆಗೆ ತಕ್ಕ ಸಮಯವನ್ನಿದಿರುನೋಡುತ್ತಿದ್ದವನೂ ಆದ ಆ ಅರಸನು ಚಾಣಕ್ಯ ಚಂದ್ರಗುಪ್ತರ ವ್ಯಾಜದಿಂದ ತನ್ನ ರಾಷ್ಟ್ರವನ್ನು ವೃದ್ಧಿಗೊಳಿಸಬಹುದಾದ ಸಮಯವು ಪ್ರಾಪ್ತವಾಗಿರುವುದನ್ನು ಕಂಡು, ತನ್ನ ಮತ್ತು ಹಗೆಯ ಬಲಾಬಲ ತಾರತಮ್ಯವನ್ನು ಕುರಿತು ಆಲೋಚಿಸುತ್ತ ನಿಶ್ಚಿತವಾದ ಪ್ರತ್ಯುತ್ತರವನ್ನೀಯದೆ ಇದ್ದನು. ಆದರೆ ಚಾಣಕ್ಯನು ಗಟ್ಟಿಗ

ನಾದುದರಿಂದ ಆತನ ಆಲೋಚನೆಗಳನ್ನು ಊಹಿಸಿಕೊಂಡು ಆತನ ಸಂಶಯಗಳು ನಶಿಸುವಂತೆ ತಕ್ಕ ಮಂತ್ರತಂತ್ರಗಳನ್ನು ಮಾಡಿ, ಅವನನ್ನು ಒಪ್ಪಿಸಿ, ನಂದ ರಾಜ್ಯದಲ್ಲಿ ಅರ್ಧ ಭಾಗವನ್ನು ಕೊಡಿಸುವಂತೆ ಒಪ್ಪಂದವನ್ನು ಮಾಡಿಸಿ, ಕೊನೆಗೆ ಆತನ ಸಹಾಯವನ್ನು ಪಡೆದನು. ಪರ್ವತರಾಜನೊಡನೆ ಆತನ ಸಹಾಯಕ್ಕಾಗಿ ಶಕ, ಯವನ, ಕಿರಾತ, ಕಾಂಭೋಜ, ಪಾರಸೀಕ, ಬಾಹ್ಲೀಕ ರಾಜಪ್ರಭೃತಿಗಳು ಹೊರಟುಬಂದರು. ಹೀಗೆ ಪ್ರಾಂತಸೀಮೆಗಳಿಂದ ದಂಡೆತ್ತಿ ಬಂದ ಮ್ಲೇಚ್ಛಬಲಗಳು ಬಹು ಸಂಖ್ಯಾಕವಾಗಿಯೂ ಶೌರ್ಯವೀರ್ಯಧೈರ್ಯಗಳಿಂದ ಕೂಡಿದುವಾಗಿಯೂ ಇದ್ದುವು.

ಚಾಣಕ್ಯ ಚಂದ್ರಗುಪ್ತರ ಆಲೋಚನೆಯಂತೆ ಮ್ಲೇಚ್ಛಬಲಗಳು ಎರಡು ಭಾಗಗಳಾಗಿ, ಒಂದು ಭಾಗವು ಪೂರ್ವದಿಕ್ಕಿನ ಗಂಡಕೀಪ್ರಾಂತವನ್ನು ಸೇರಿ ಪಾಟಲೀಪುರವನ್ನು ಮುತ್ತಹೋಗಲು, ಪರ್ವತರಾಜನಿಂದ ನಡೆಯಿಸಲ್ಪಟ್ಟ ಮೂಲಬಲವು ಗಂಗಾಶೋಣಾ ಸಂಗಮದ ಕಡೆಗೆ ನಡೆಯಿತು. ನಂದರು ತಮ್ಮ ಸೈನ್ಯಗಳನ್ನು ನಡೆಯಿಸಿಕೊಂಡು ಸರಯೂಸಂಗಮದಲ್ಲಿ ಶತ್ರುವಿಗಾಗಿ ಕಾದಿರಲು, ಇಂದುಶರ್ಮನು ತಂತ್ರಗಳನ್ನು ಮಾಡಿ, ನಂದರನ್ನು ಸೈನ್ಯದಿಂದ ಹೊರಚ್ಚು ಮಾಡಿ, ಚಾಣಕ್ಯನ ಬಲೆಯಲ್ಲಿ ಸಿಕ್ಕಿಸಿದನು. ಅಷ್ಟರಲ್ಲಿ ಈತನು ಇವರೆಲ್ಲರನ್ನೂ ಕೊಲ್ಲಿಸಿ ಮೊದಲನೆಯ ಪ್ರತಿಜ್ಞೆಯನ್ನು ನೆರವೇರಿಸಿಕೊಂಡನು,

---

## ಮಂತ್ರಿ ರಾಕ್ಷಸನು,

ನಂದಮಂತ್ರಿಗಳಲ್ಲಿ ಪ್ರಮುಖನೂ, ಪ್ರಚಂಡಧೀದೋರ್ಬಲಸಂಪನ್ನನೂ ಆದ ರಾಕ್ಷಸನೆಂಬ ಹೆಸರಿನ ಒಬ್ಬ ಮಂತ್ರಿಯಿದ್ದನು. ರಾಜ್ಯನಿರ್ವಹಣ ವಿಷಯದಲ್ಲಿ ಇವನಿಗೆ ಸಮಾನರಾದವರು ಯಾರೂ ಆ ಕಾಲದಲ್ಲಿಲ್ಲದಿದ್ದುದರಿಂದ, ಅಂತಹ ಅಮಾನುಷ ಪ್ರಜ್ಞಾಶೌರ್ಯಗಳಿಗೆ ಉಚಿತವಾದ ರಾಕ್ಷಸನೆಂಬ ಬಿರುದನ್ನು ಹೊಂದಿ ಇದ್ದನು. ಸ್ವಾಮಿಭಕ್ತಿಪರಾಯಣನಾದ ಈತನು ತನ್ನ ಅನುಪಮ ಸಾಹಸಗಳಿಂದ ವೈರಿಗಳ ಸೈನ್ಯವನ್ನು ಸೋಲಿಸಿ, ನೋಯಿಸಿ, ನಂದರ ಶ್ಲಾಘನೆಯನ್ನು ಪಡೆದನಾದರೂ ನಂದನಾಶವೃತ್ತಾಂತವೂ ಸೇನೆಗಳಲ್ಲಿ ಹಬ್ಬುತ್ತಲೇ ಪರ್ವತರಾಜನ ಬಲಕ್ಕೆ ಉತ್ಸಾಹಾಧಿಕ್ಯವೂ, ಪಾಟಲೀಪುರದ ಬಲಕ್ಕೆ ದೈನ್ಯಾಧಿಕ್ಯವೂ, ರಾಕ್ಷಸನಿಗೆ ಶೋಕವಿಹ್ವಲತೆಯೂ ಉಂಟಾಯಿತು.

ನಂದಸಂಹಾರವಾದರೂ ಚಂದ್ರಗುಪ್ತನು ಮಂತ್ರಿಯಾದ ರಾಕ್ಷಸನ ಪ್ರತಿಭಾವಿಶೇಷಕ್ಕೂ ಸ್ವಾಮಿಭಕ್ತಿಗೂ ಹೆದರಿ, ಪಾಟಲೀನಗರವನ್ನು ಪ್ರವೇಶಿಸಲಿಲ್ಲ. ಮತ್ತು ಚಾಣಕ್ಯನು ತನ್ನ ಎರಡನೆಯ ಶಪಥವಾದ ಚಂದ್ರಗುಪ್ತ ಪಟ್ಟಾಭಿಷೇಕವನ್ನು ನಡೆಯಿಸುವುದಕ್ಕೆ ಉಪಾಯಗಳನ್ನು ಆಲೋಚಿಸುತ್ತ ಪಾಟಲಿಪುರಪ್ರವೇಶ ಪ್ರಯತ್ನದಲ್ಲಿ ಉದ್ಯುಕ್ತದಾದನು. ಆದುದರಿಂದ ಜಯವಾದ ರಾತ್ರಿ ಪಾರ್ವತೀಯ ಬಲಗಳು ಪುರಕ್ಕೆ ದೂರವಾಗಿ ಶಿಬಿರಗಳಲ್ಲಿ ಬೀಡುಬಿಟ್ಟಿದ್ದುವು.

---

## ವಿಷಕನ್ಯಕೆ,

ಇಷ್ಟರಲ್ಲಿ ರಾಕ್ಷಸನು, ಚಾಣಕ್ಯ ಚಂದ್ರಗುಪ್ತ ಪರ್ವತೇಶ್ವರಾದಿಗಳ ಸಂಹಾರವೇ ನಂದರಿಗೆ ಉಚಿತವಾದ ತರ್ಪಣವೆಂದು ನಿಶ್ಚಯಿಸಿಕೊಂಡು, ಅದನ್ನು ಮುಗಿಸುವುದಕ್ಕೆ ಯುದ್ಧೋಪಾಯವು ಕೆಲಸಕ್ಕೆ ಬಾರದುದರಿಂದ, ತಕ್ಕ ಮಾಯೋಪಾಯಗಳನ್ನು ತನ್ನ ಶಕ್ತಿಮೀರಿ ಮಾಡಿದನು. ಅದರಲ್ಲಿ ಮೊದಲನೆಯದು ವಿಷಕನ್ಯಾಪ್ರಯೋಗವು. ಚಿರಕಾಲದಿಂದಲೂ ರಾಕ್ಷಸನು ಒಂದು ಹುಡುಗಿಯನ್ನು ಸಾಕುತ್ತ ಬಂದಿದ್ದನು. ಇವಳಿಗೆ ಕ್ರಮಕ್ರಮವಾಗಿ ಅಲ್ಪಮಾನದಿಂದ ಹೆಚ್ಚಿಸುತ್ತ ಅಧಿಕಮಾನದ ಪರ್ಯಂತವೂ ಜೀರ್ಣವಾಗುವಂತೆ ವಿಷವನ್ನು ಕೊಡಿಸುತ್ತಲಿದ್ದನು. ಈ ಚಿಕ್ಕವಳು ಈಗ ನವಯುವತಿಯಾಗಿಯೂ ಜಗನ್ಮೋಹನಾಂಗಿಯಾಗಿಯೂ ಇದ್ದಳು. ಜೀವಸಿದ್ಧಿಯೆಂಬ ಹೆಸರಿಂದ ತನ್ನ ಹತ್ತಿರ ಆಶ್ರಿತನಾಗಿಯೂ, ವಿಶ್ವಾಸಪಾತ್ರನಾಗಿಯೂ, ದೈವಜ್ಞಸೂತ್ರನಾಗಿಯೂ ಇದ್ದ ಕ್ಷಪಣಕ ವೇಷಧಾರಿಯಾದ ಇಂದುಶರ್ಮನನ್ನು ಕರೆದು, ಆತನನ್ನು ಅನೇಕ ವಿಧವಾಗಿ ಹೊಗಳಿ ಒಂದು ಸಂದೇಶಕ್ಕೆ ಒಪ್ಪಿಸಿ, ವಿಷಕನ್ಯಕೆಯನ್ನು ಆತನಿಗೊಪ್ಪಿಸಿ, ಚಂದ್ರಗುಪ್ತನಿಗೆ, ತನ್ನ ಕ್ಷಮಾಪಣಾ ಸ್ವಾಗತಸೂಚಕವಾದ ಕಾಣಿಕೆಯಾಗಿ ಆ ಕನ್ಯೆಯನ್ನು ಒಪ್ಪಿಸುವಂತೆ ಕೇಳಿಕೊಂಡನು. ಅಂತಹ ಸಂದೇಶಸಮರ್ಪಣೆಗಳೊಡನೆ ಆ ಜೀವಸಿದ್ಧಿಯು ಚಾಣಕ್ಯನ ಸನ್ನಿಧಿಯನ್ನು ಸೇರಲು, ಈತನೂ ರಾಕ್ಷಸಾಪೇಕ್ಷೆಯನ್ನು ಊಹಿಸಿ, ಚಂದ್ರಗುಪ್ತನಿಗೆ ಪರಸ್ತ್ರೀಕಾಂಕ್ಷೆಯಿಲ್ಲದುದನ್ನು ತಿಳಿಸಿ, ಪರ್ವತೇಶ್ವರನ ಸಮಾಗಮಕ್ಕೆ ತೆಗೆದುಕೊಂಡು ಹೋಗುವಂತೆ ಉಪಾಯವನ್ನು ಮಾಡಿಸಿದನು. ಆಗ ಬುದ್ಧಿಹೀನನೂ, ಕಾಮಾತುರನೂ ಆದ ಆ ಪರ್ವತೇಶ್ವರನು ಆ ಕನ್ಯಕೆಯನ್ನು ಸ್ವೀಕರಿಸಿ ವಿಷಸ್ಪೃಷ್ಟನಾಗಿ ಮೃತಿಹೊಂದಿದನು. ಹೀಗೆ ಚಾಣಕ್ಯನು ಈ ಯುಕ್ತಿ

ಯಿಂದ ಚಂದ್ರಗುಪ್ತನ ಪ್ರಾಣಗಳನ್ನು ಉಳಿಸಿಕೊಳ್ಳುವುದರೊಡನೆ ನಂದರಾಜ್ಯ ದಲ್ಲಿ ಅರ್ಧವನ್ನು ಕೇಳದ ಹಾಗೆ ಪರ್ವತೇಶ್ವರನನ್ನೂ ಸಂಹರಿಸಿದನು.

---

## ಬಾಗುರಾಯಣನು.

ಪರ್ವತರಾಜನ ಮಗನ ಹೆಸರು ಮಲಯಕೇತು. ತಂದೆಯ ಮರಣದಿಂದ ಭೀತನಾಗಿದ್ದ ಮಲಯಕೇತುವಿನ ಹತ್ತಿರಕ್ಕೆ ನಂದಸೇನಾಪತಿಯಾದ ಬಾಗುರಾಯ ಣನು ಬಂದು, ಪರ್ವತರಾಜನು ಚಾಣಕ್ಯನಿಂದಲೇ ಹತನಾದನೆಂತಲೂ ಮಲಯ ಕೇತುವು ಕೂಡಲೇ ಸ್ವದೇಶಕ್ಕೆ ಓಡಿಹೋಗದಿದ್ದಲ್ಲಿ, ಅವನನ್ನೂ, ಅರ್ಧರಾಜ್ಯ ವನ್ನೂ ಸೆಳಕೊಳ್ಳಲು ಯೋಚಿಸಿದ ಚಾಣಕ್ಯನಿಂದ ಕೊಲ್ಲಿಸುತ್ತಿದ್ದನೆಂತಲೂ ಹೇಳಿ, ಚಂದ್ರಗುಪ್ತ ಚಾಣಕ್ಯರ ಮೇಲೆ ತನಗೆ ಭಕ್ತಿಯಿಲ್ಲದುದರಿಂದಲೂ ಮಲಯಕೇತು ವನ್ನೇ ಆಶ್ರಯಿಸುವೆನೆಂತಲೂ ನಿಶ್ಚಯಿಸಿ ಬಂದಂತೆ ತಿಳಿಸಿ, ಆತನ ಹತ್ತಿರ ಸಭೆ ಯಲ್ಲಿದ್ದು, ಚಂದ್ರಗುಪ್ತನ ಪರವಾಗಿ ಮಲಯಕೇತುವನ್ನು ವಂಚಿಸಿದನು. ಮಲ ಯಕೇತುವು ಆ ಮಾತುಗಳನ್ನು ನಂಬಿದನು. ಬಾಗುರಾಯಣನೂ ಅದರಂತೆಯೇ ನಡೆಯುತ್ತ ಮಲಯಕೇತುವನ್ನು ಕೂಡಿಕೊಂಡು ಪರ್ವತರಾಜ್ಯವನ್ನು ಸೇರಿ ಆತ ನಿಗೆ ಅಮಾತ್ಯನಾಗಿದ್ದನು.

---

## ರಾಕ್ಷಸನ ಮಾಯೋಪಾಯಗಳು.

ಹೀಗೆ ಪರ್ವತರಾಜನು ಸತ್ತು, ಮಲಯಕೇತುವು ಓಡಿಹೋಗಲು, ಚಾಣಕ್ಯ ಚಂದ್ರಗುಪ್ತರು ಪಾಟಲೀಪುರವನ್ನು ಜಯಘೋಷದೊಡನೆ ಪ್ರವೇಶಿಸಿದರು. ರಾಕ್ಷಸನು ಅದಕ್ಕೊಪ್ಪಿಕೊಂಡಂತೆ ಅಭಿನಯಿಸುತ್ತ, ಪ್ರವೇಶಿಸಿದ ಸೈನ್ಯಗಳ ಮೇಲೆ ತನ್ನ ಸೈನ್ಯಗಳನ್ನು ಪ್ರೇರಿಸಿ, ಅನೇಕ ಶತ್ರುಗಳನ್ನು ಸಂಹರಿಸಿದನು ನಂದಪಕ್ಷವೇ ಜಯಿಸಿದಂತೆ ಜಯಭೇರಿಗಳನ್ನು ಹೊಡೆಯಿಸಿ ಚಂದ್ರಗುಪ್ತ ಪಟ್ಟಾ ಭಿಷೇಕವನ್ನು ಆತಂಕ ಪಡಿಸಿದನು. ಸರ್ವಾರ್ಥಸಿದ್ಧಿಯನ್ನು ಭದ್ರಪಡಿಸಿಟ್ಟಲ್ಲಿ, ಸ್ವೀಕೃತಪುತ್ರನ ಮೂಲಕವಾಗಿ ನಂದವಂಶವನ್ನು ನಿಲ್ಲಿಸಬಹುದೆಂದೆಣಿಸಿ, ಆತ ನನ್ನು ಸುರಂಗಮಾರ್ಗವಾಗಿ ನಗರದಿಂದ ಕಳುಹಿಸಿ, ತಪೋವನದಲ್ಲಿ ಇರ ತಕ್ಕುದೆಂದು ಪ್ರಾರ್ಥಿಸಿ ಕಳುಹಿಸಿದನು. ತನಗೆ ಅತ್ಯಂತ ಪ್ರಾಣಸಖನಾದ

ಚಂದನದಾಸನ ವಶದಲ್ಲಿ ಗರ್ಭಿಣಿಯಾದ ತನ್ನ ಹೆಂಡತಿಯನ್ನೂ ಮಕ್ಕಳನ್ನೂ ಗೋಪ್ಯವಾಗಿರಿಸಿದನು. ತನ್ನ ಕಾರ್ಯಸ್ಥನಾದ ಶಕಟದಾಸನ ವಶದಲ್ಲಿ ರಹಸ್ಯವಾದ ಧನಕೋಶಗಳನ್ನು ಕೊಟ್ಟು ನಂದಪಕ್ಷಬಲಕ್ಕಾಗಿ ಯುಕ್ತರೀತಿಯಿಂದ ವ್ಯಯಮಾಡಹೇಳಿದನು. ಸೂತ್ರಧಾರನಾದ ದಾರುವರ್ಮನನ್ನು ಕರೆದು, ರಾಜಭವನದ ಹೆಬ್ಬಾಗಿಲನ್ನು ಕನಕತೋರಣಾದಿಗಳಿಂದ ಅಲಂಕರಿಸಿ, ಅದರಲ್ಲಿ ಯಂತ್ರವನ್ನು ನಿಲ್ಲಿಸಿ, ಅದನ್ನು ಚಂದ್ರಗುಪ್ತನು ಪ್ರವೇಶಿಸುವಾಗ ಸಡಲಿಸಿ, ಅವನ ತಲೆಯ ಮೇಲೆ ತಳ್ಳಿಸಿ, ಕೊಲ್ಲಲು ಆತನನ್ನು ನಿಯಮಿಸಿದನು. ಪಟ್ಟದಾನೆಯ ಮಾವಟಿಗನಾದ ಬರ್ಬರಕನನ್ನು ಕರೆದು, ಸವಾರಿ ಹೋಗುವ ಕಾಲದಲ್ಲಿ, ಅನುವಾದ ಸಮಯನೋಡಿ ಕನಕದಂಡದಲ್ಲಿ ಅಡಗಿಸಿಟ್ಟ ಕತ್ತಿಯನ್ನು ಹಿರಿದು ಹಿಂದಿರುವ ಚಂದ್ರಗುಪ್ತನನ್ನು ತಿವಿದು ಕೊಲ್ಲೆಂದು ಹೇಳಿದನು. ರಾಜವೈದ್ಯನಾದ ಅಭಯದತ್ತನನ್ನು ಕರೆಯಿಸಿ, ಯೋಗಚೂರ್ಣವನ್ನು ಕಲಸಿದ ಔಷಧದಿಂದ, ಚಂದ್ರಗುಪ್ತನ ಮರಣವನ್ನು ಸಂಪಾದಿಸಿಕೊಳ್ಳೆಂದು ಪ್ರೇರಿಸಿದನು. ರಾಜಶಯನಾಧಿಕಾರಿಯಾದ ಪ್ರಮೋದಕನನ್ನು ಕರೆದು, ಚಂದ್ರಗುಪ್ತನು ಮೈಮರೆತು ನಿದ್ರೆಹೋಗುವಾಗ ಸಾಣೆಹಿಡಿದ ಕತ್ತಿಯಿಂದ ಸಂಹರಿಸುವುದಾಗಿ ಹೇಳಿದನು. ರಾಜಗೃಹದ ಒಳಗೋಡೆಯ ಸುರಂಗದಲ್ಲಿ ಬೀಭತ್ಸಕಾದಿ ಘಾತುಕಸಮೂಹವನ್ನು ಕಾದಿರುವಂತೆ ಹೇಳಿ, ನಿದ್ದೆಹೋಗುವಾಗ ಚಂದ್ರಗುಪ್ತನನ್ನು ಹೊಡೆದು ಕೊಲ್ಲುವಂತೆ ಪ್ರಯತ್ನವನ್ನು ಮಾಡಿದನು. ರಾಕ್ಷಸನು ಈ ಪ್ರಕಾರವಾಗಿ ಎಲ್ಲ ಸಂದಿಗ್ಧ ಸಮಯಗಳಲ್ಲಿಯೂ ಚಂದ್ರಗುಪ್ತ ಸಂಹಾರಕ್ಕಾಗಿ ಅತಿ ಚತುರವಾದ ಉಪಾಯಗಳನ್ನು ಮಾಡಿದರೂ ಅವುಗಳಲ್ಲೊಂದಾದರೂ ಫಲಕಾರಿಯಾಗದೆ ಹೋಯಿತು.

ಸರ್ವಾರ್ಥಸಿದ್ಧಿಯು ತಪೋವನಕ್ಕೆ ಹೋದುದನ್ನು ಕೇಳಿ, ಚಾಣಕ್ಯನು ನಂಬುಗೆಯುಳ್ಳಘಾತುಕರನ್ನು ಕರೆದು ಆತನನ್ನು ಕೊಲ್ಲಿಸಿದನು. ಹೀಗೆ ವಿಷಕನ್ಯೆಯ ಮೂಲಕ ಉಂಟಾದ ಪರ್ವತರಾಜನ ಮರಣವನ್ನೂ, ಚಾಣಕ್ಯಪ್ರಯತ್ನದಿಂದ ಸರ್ವಾರ್ಥಸಿದ್ಧಿಯು ಮರಣಹೊಂದಿದುದನ್ನೂ ಕೇಳಿ, ರಾಕ್ಷಸನು ತಾನಿನ್ನು ಪಾಟಲೀಪುರದಲ್ಲಿ ನಿಲ್ಲಲಾಗದೆಂದು ಯೋಚಿಸಿ ಸುರಂಗಮಾರ್ಗವಾಗಿ ನಗರವನ್ನು ಬಿಟ್ಟು ಪರ್ವತರಾಜ್ಯಕ್ಕೆ ಹೋದನು. ಅಲ್ಲಿಗೆ ಹೋಗಿ, ಮಲಯಕೇತುವನ್ನಾಶ್ರಯಿಸಿ, ತನಗೆ ನಂದರಲ್ಲಿರುವಭಕ್ತಿಯನ್ನೂ, ಮೃತರಾದ ನಂದರಿಗಾಗಿ ತನ್ನ ತರ್ಪಣಪ್ರತಿಜ್ಞೆಯನ್ನೂ ಬಿಚ್ಚಿ ಹೇಳಿದನು. ಪರ್ವತೇಶ್ವರನಿಗೆ, ಉಚಿತ ತರ್ಪಣವನ್ನು ಶತ್ರುಸಂಹಾರರೂಪದಿಂದ ಮಲಯಕೇತುವು ಆಚರಿಸತಕ್ಕುದೆಂದು ಚೆನ್ನಾಗಿ ಬೋಧಿಸಿದನು. ರಾಕ್ಷಸನಂತಹ ಅಮಾತ್ಯಶ್ರೇಷ್ಠನು ಜತೆಯಲ್ಲಿರುವಾಗ ತನಗೆ ತಪ್ಪದೆ

ಜಯವುಂಟಾಗುವುದೆಂದು ನಿಶ್ಚಯಿಸಿ, ಮಲಯಕೇತುವು ತನ್ನ ಸೈನ್ಯಗಳನ್ನೆಲ್ಲ ಸಿದ್ಧಪಡಿಸಿ, ಯುದ್ಧಕ್ಕೆ ಹೊರಟನು. ಆತನಿಗೆ ಶಕ, ಗಾಂಧಾರ, ಯವನ, ಕಶ, ಚೀನ ಹೂಣ, ಕೌಲೂತಾದಿ ರಾಜರು ಸಹಾಯಕರಾದರು.

---

## ಚಾಣಕ್ಯನ ಪ್ರಯತ್ನಗಳು.

ಚಾಣಕ್ಯನು ಈ ವಿನೋದಗಳನ್ನು ನೋಡುತ್ತ ಸುಮ್ಮನಿದ್ದನೇ? ಇಲ್ಲ. ರಾಕ್ಷಸನ ಪ್ರಯತ್ನಗಳೆಲ್ಲವನ್ನೂ ಚಾರರಿಂದ ತಿಳಿದುಕೊಳ್ಳುತ್ತ ಆತನ ಮಾಯೋಪಾಯಗಳೆಲ್ಲಕ್ಕೂ ಪ್ರತಿಮಾಯೋಪಾಯಗಳನ್ನು ಮಾಡುತ್ತ ಚಂದ್ರಗುಪ್ತನಿಗೆ ಯಾವಬಾಧೆಯೂ ತಟ್ಟದಂತೆ ಕಾಪಾಡುತ್ತಿದ್ದನು. ತನ್ನ ಪರಮಮಿತ್ರನಾದ ಪರ್ವತರಾಜನ ಮರಣಕ್ಕಾಗಿ, ರಾಕ್ಷಸನ ಆಜ್ಞೆಯಂತೆ ವಿಷಕನ್ಯಕೆಯನ್ನು ಕರೆತಂದನೆಂದು ದೂರುಹೊರಿಸಿ ಜೀವಸಿದ್ಧಿಯನ್ನು ಊರಿನಿಂದ ಗಡಿಪಾರುಮಾಡಿಸಿದನು. ಇದರಿಂದ ತಿರುಗಿಯೂ ಜೀವಸಿದ್ಧಿಗೆ ರಾಕ್ಷಸನ ಆಶ್ರಯವು ದೊರೆಯುವುದಕ್ಕೂ, ಹೀಗೆ ಅನುಕೂಲವಾಗಿ ಚಂದ್ರಗುಪ್ತನ ಪರವಾಗಿ ನೋಡಿಕೊಳ್ಳುವುದಕ್ಕೂ ರಾಕ್ಷಸಮಲಯಕೇತುಗಳಿಗೆ ವೈರವನ್ನುಂಟುಮಾಡುವುದಕ್ಕೆ ಎಡೆದೊರಕಿತು. ಮತ್ತು ಈ ಉಪಾಯದಿಂದ ಪರ್ವತರಾಜನ ಸಮೀಪಕ್ಕೆ ವಿಷಕನ್ಯೆಯನ್ನು ಕಳುಹಿಸಿದವನು ಚಾಣಕ್ಯನೆಂಬ ಅಪವಾದವು ತೊಲಗಿ, ಆ ಕನ್ಯೆಯನ್ನು ರಾಕ್ಷಸನೇ ಕಳುಹಿಸಿದನೆಂಬ ಅಪವಾದವು ಹುಟ್ಟಿತು.

ಚಾಣಕ್ಯನು, ಪಟ್ಟಣದಲ್ಲೆಲ್ಲ ತನ್ನ ಚಾರರನ್ನು ಕಳುಹಿಸಿ, ನಂದಪಕ್ಷಪಾತಿಗಳು ಯಾರು ಯಾರು ಎಲ್ಲೆಲ್ಲಿರುವರೆಂಬುದನ್ನು ತಿಳಿದುಕೊಳ್ಳುತ್ತಿದ್ದನು. ಒಬ್ಬ ಚಾರನ ಮುಖಾಂತರ ಅಮಾತ್ಯರಾಕ್ಷಸನ ಹೆಂಡಿರುಮಕ್ಕಳು ಪಾಟಲೀಪುರದಲ್ಲಿಯೇ ಒಬ್ಬ ಸೆಟ್ಟಿಯ ಮನೆಯಲ್ಲಿರುವರೆಂಬುದನ್ನು ತಿಳಿದುಕೊಂಡನಷ್ಟೇ ಅಲ್ಲದೆ, ರಾಕ್ಷಸನ ಕಯ್ಯ ಮುದ್ರೆಯನ್ನು ಕೂಡ ಸಂಪಾದಿಸಿದನು. ಆ ಮುದ್ರಿಕೆಯ ಸಹಾಯದಿಂದ ಆತನು ಕೆಲವು ಕಾಗದಗಳನ್ನು ಸೃಷ್ಟಿಸಿ, ಮಲಯಕೇತುವಿಗೂ ರಾಕ್ಷಸನಿಗೂ ವೈರವುಂಟಾಗುವಂತೆ ಮಾಡಿ, ಅವರು ದಂಡೆತ್ತಿ ಬರುವುದನ್ನು ವ್ಯರ್ಥಗೊಳಿಸಿದನು. ಹೀಗೆ ರಾಕ್ಷಸನು ಮಾಡಿದ ಪರಶಿಕ್ಷಣೋಪಾಯಗಳಿಗೆಲ್ಲ ಚಾಣಕ್ಯನು ತಕ್ಕ ಪ್ರತಿವಿಧಾನಗಳನ್ನು ಏರ್ಪಡಿಸಿ ಜಾಗರೂಕತೆಯಿಂದ ಚಂದ್ರಗುಪ್ತನನ್ನು ರಕ್ಷಿಸುತ್ತಲಿದ್ದನು. ನಂದಾದಿಗಳೆಲ್ಲರೂ ಮೃತಿಯೊಂದಿದರೂ ಅವರಲ್ಲೆ

ಭಕ್ತಿವಿಶ್ವಾಸಗಳುಳ್ಳವನಾಗಿ, ಅವರ ಶತ್ರುವಾದ ಚಂದ್ರಗುಪ್ತನನ್ನು ಹೇಗಾದರೂ ಸಂಹರಿಸಿ, ತೀರಿಕೊಂಡ ತನ್ನ ಸ್ವಾಮಿಗಳಿಗೆ ತೃಪ್ತಿಯುಂಟಾಗುವಂತೆ ಮಾಡಬೇಕೆಂದ ಅಮಾತ್ಯರಾಕ್ಷಸನು ಹಿಡಿದ ಹಟವನ್ನು ಬಿಡದಿದ್ದನು. ಚಾಣಕ್ಯನು ರಾಕ್ಷಸನ ಸ್ವಾಮಿಭಕ್ತಿಗೆ ಮೆಚ್ಚಿ, ಅಮಾತ್ಯರಾಕ್ಷಸನಂತಹ ಮಂತ್ರಿಯು ಚಂದ್ರಗುಪ್ತನಿಗೆ ಸಿಕ್ಕಿದಲ್ಲಿ, ಆತನು ಅಸಮಾನ್ಯ ವೈಭವಾಶಲಿಯಾಗುವನೆಂದು ತಿಳಿದು, ರಾಕ್ಷಸನಿಗೆ ಬಗೆಬಗೆಯ ಆಶೆಗಳನ್ನು ತೋರಿ ಚಾಣಕ್ಯನು ಅವನನ್ನು ವಶಪಡಿಸಿಕೊಳ್ಳಲೆಣಿಸಿದರೂ, ಸ್ವಾಮಿಭಕ್ತಿಪರಾಯಣನಾದ ರಾಕ್ಷಸನು ಮಾತ್ರ ಒಳಬೀಳದೆ ಇದ್ದನು. ಆದರೂ ಕೊನೆಗೆ ಉಪಾಯಾಂತರಗಳಿಂದ ರಾಕ್ಷಸನನ್ನೂ ವಶಮಾಡಿಕೊಳ್ಳದಿರಲಿಲ್ಲ.

---

## ರಾಕ್ಷಸನನ್ನು ವಶಮಾಡಿಕೊಳ್ಳುವುದು.

ಚಂದನದಾಸನೆಂಬ ಸೆಟ್ಟಿಯು ಪಾಟಲೀಪುರದಲ್ಲಿದ್ದನು. ಆತನು ರಾಕ್ಷಸನ ಪರಮ ಮಿತ್ರನು. ರಾಕ್ಷಸನು ಊರು ಬಿಟ್ಟು ಹೊರಟುಹೋಗುವಾಗ ತನ್ನ ಹೆಂಡಿರುಮಕ್ಕಳನ್ನು ಈತನ ಮನೆಯಲ್ಲಿಯೇ ಬಿಟ್ಟುಹೋದನು. ಈ ಸಂಗತಿಯನ್ನು ತಿಳಿದು ಚಾಣಕ್ಯನು ರಾಕ್ಷಸನ ಹೆಂಡಿರುಮಕ್ಕಳನ್ನು ತನ್ನ ಸ್ವಾಧೀನ ಮಾಡಬೇಕೆಂದು ಚಂದನದಾಸನನ್ನು ನಿರ್ಬಂಧಪಡಿಸಿದನು. ಆದರೂ ಅವನು ಮಿತ್ರದ್ರೋಹವನ್ನೆಂದಿಗೂ ಮಾಡಲಿಲ್ಲ. ಅದಕ್ಕೆ ಆತನಿಗೆ ಮರಣದಂಡನೆಯು ವಿಧಿಸಲ್ಪಟ್ಟಿತು. ಈ ಸಮಾಚಾರವನ್ನು ತಿಳಿದು, ತನಗಾಗಿ ತನ್ನ ಮಿತ್ರನು ಕೊಲೆಗೆ ಈಡಾಗುವುದು ನ್ಯಾಯವಲ್ಲವೆಂದು ಯೋಚಿಸಿ, ರಾಕ್ಷಸನು ತನ್ನ ಪ್ರತಿಸ್ಪರ್ಧಿಯಾದ ಚಾಣಕ್ಯನ ಅಧೀನನಾಗಿ, ತನ್ನನ್ನು ಕೊಂದು ತನ್ನ ಮಿತ್ರನನ್ನು ಬಿಡಬೇಕೆಂದು ಕೋರಿದನು. ಆಗ "ನೀನು ಚಂದ್ರಗುಪ್ತನ ಮಂತ್ರಿತ್ವವನ್ನು ಒಪ್ಪಿಕೊಂಡಲ್ಲಿ ನಿನ್ನ ಮಿತ್ರನನ್ನು ರಕ್ಷಿಸುವೆನು"—ಎಂದು ಚಾಣಕ್ಯನು ಹೇಳಲಾಗಿ ವಿಧಿಯಿಲ್ಲದೆ ರಾಕ್ಷಸನು ಇದಕ್ಕೊಪ್ಪಿಕೊಂಡನು.

**ಈ ಸಮಾಚಾರವೆಲ್ಲವೂ ಕ್ರಿ. ಪೂ. ೩೨೨ನೆಯ ಸಂವತ್ಸರದ ಕಾಲದಲ್ಲಿ ನಡೆದಿರಬಹುದು. ಅಮಾತ್ಯರಾಕ್ಷಸನ ಸಹಾಯದಿಂದಲೂ, ಚಾಣಕ್ಯನ ಮಂತ್ರಸಹಾಯದಿಂದಲೂ, ಚಂದ್ರಗುಪ್ತನು ಅರಿಭಂಜಕನಾಗಿ ತನ್ನ ರಾಜ್ಯವನ್ನು ಭರತಖಂಡದಲ್ಲೆಲ್ಲ ಸ್ಥಾಪಿಸಿದುದೇ ಅಲ್ಲದೆ, ಹಿಮಾಲಯ ಪರ್ವತದ ಆಚೆಗಿರುವ ದೇಶವನ್ನೂ ಸಾಧಿಸಿದನು.**

## ಚ ರಿ ತ್ರಾಂ ಶ ಗ ಳು.

ಚಾಣಕ್ಯನು ರಾಕ್ಷಸನನ್ನು ವಶಮಾಡಿಕೊಂಡಾಗಲೇ ಮಲಯಕೇತುವನ್ನೂ ವಶಪಡಿಸಿಕೊಂಡು, ಚಂದ್ರಗುಪ್ತನ ಸಾಮಂತರಾಜನಾಗಿರುವಂತೆ ಒಪ್ಪಿಸಿ, ಅವನ ರಾಜ್ಯಕ್ಕೆ ಕಳುಹಿಸಿಬಿಟ್ಟನು. ಈ ಮಲಯಕೇತುವು ಯಾರಾಗಿರಬಹುದು? ಈತನ ಅಧೀನದಲ್ಲಿದ್ದ ಮ್ಲೇಚ್ಛ, ಯವನ, ಕಾಂಭೋಜಾದಿ ಸೈನ್ಯಗಳೆಂದರೆ, ಯಾವುವು? ಈ ಪ್ರಶ್ನೆಗಳಿಗೆ ಹಲವು ಪಂಡಿತರು ಹಲವು ರೀತಿಯಾಗಿ ಪ್ರತ್ಯುತ್ತರ ಕೊಡುತ್ತಿರುವರು. ಮಲಯಕೇತುವಿನ ತಂದೆಯು ಪರ್ವತರಾಜನೆಂದು ಹೇಳಲಾಗಿದೆ. ಆದುದರಿಂದ ಅವನು ಹಿಮಾಲಯ ಗಿರಿಕಂದರ ಪ್ರಾಂತ್ಯಗಳಲ್ಲಿ ವಾಸವಾಗಿರುವವನೆಂದು ತೋರುತ್ತಿದೆ. ಚಂದ್ರಗುಪ್ತನಿಗೆ ಹೀಗೆ ಸಹಾಯಮಾಡಿದ ಸೈನ್ಯಗಳು ಗ್ರೀಕ ಸೈನ್ಯಗಳೆಂದು ಕೆಲವು ಜರೋಪ್ಯರ ಅಭಿಪ್ರಾಯವು. ಆದರೂ ಗ್ರೀಕ ಚರಿತ್ರಕಾರರೆಲ್ಲ ಚಂದ್ರಗುಪ್ತನಿಗೆ ಗ್ರೀಕ ಸೈನ್ಯಗಳು ಸಹಾಯಮಾಡಿದಂತೆ ಬರೆಯದಿರುವುದರಿಂದ ಮೇಲಣ ಅಭಿಪ್ರಾಯವು ಸರಿಯಲ್ಲವೆಂದು ಕೀರ್ತಿಶೇಷರಾದ ಕಾಶೀನಾಥ ತ್ರ್ಯಂಬಕ ತೇಲಂಗರವರು ಅಭಿಪ್ರಾಯಪಡುವರು. ಫಿಲಿಪ್ಪಾಸ್ ಎಂಬ ಗ್ರೀಕ್ ಕ್ಷಾತ್ರಪನನ್ನು ಹಿಂದೂಗಳು ಕೊಂದರೆಂದು ಕರ್ಟಿಯಸ್ ಮೊದಲಾದ ಗ್ರಂಥಕಾರರು ಬರೆದಿರುವುದರಿಂದ ಈ ಕ್ಷಾತ್ರಪನೇ ಹಿಂದೂ ಗ್ರಂಥಗಳಲ್ಲಿ ಪರ್ವತರಾಜನೆಂಬ ಹೆಸರಿಂದ ವರ್ಣಿತನಾಗಿರಬಹುದೆಂದು ಯೋಚಿಸಬಹುದಾಗಿದೆ. ತರುವಾಯ ಚಂದ್ರಗುಪ್ತನಿಂದ ಪರಾಜಿತನಾಗಿ, ಆತನೊಡನೆ ಸಂಧಿಮಾಡಿಕೊಂಡ ಸೆಲ್ಯೂಕಸ್ ಎಂಬುವನೇ ಮಲಯಕೇತುವಾಗಿರಬಹುದಾದರೂ, ಇದು ಹೀಗೆಯೇ ಎಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ. ಹಿಮಾಲಯ ಪರ್ವತದ ಸಮಪ್ರದೇಶಗಳಲ್ಲಿಯೂ, ದರಿಗಳಲ್ಲಿಯೂ ಪಾರ್ವತೀಯ ಜಾತಿಯವರನೇಕರು ಈಗಲೂ ವಾಸವಾಗಿರುವರು. ಅಂತಹವರು ಕೆಲವರು ಚಂದ್ರಗುಪ್ತನಿಗೆ ಸಹಾಯವಾಗಿ ಬಂದಿರಬಹುದು. ಆಗ ಆ ಪ್ರಾಂತಗಳಲ್ಲಿ ಗ್ರೀಕರೂ ಕೆಲವರು ಇದ್ದುದರಿಂದ ಅವರು ಕೂಡ ಈ ಸೈನ್ಯದಲ್ಲಿ ಸೇರಿದ್ದರೂ ಇರಬಹುದು.

---

# ನಾಲ್ಕನೆಯ ಪ್ರಕರಣ.

---

## ಗ್ರೀಕರೊಡನೆ ಯುದ್ಧ.

ಚಂದ್ರಗುಪ್ತನು ಅಸಂಖ್ಯಾತವಾದ ಸೈನ್ಯಗಳನ್ನು ಕೂಡಿಕೊಂಡು, ಅಪರಿಮಿತ ಪರಾಕ್ರಮಶಾಲಿಯಾಗಿ ಅದುವರೆಗೆ ಪಂಜಾಬದೇಶವನ್ನು ಆಕ್ರಮಿಸಿದ್ದ ಗ್ರೀಕಸೈನ್ಯಗಳನ್ನು ನಿಶ್ಶೇಷವಾಗಿ ಓಡಿಸಿ ಹೊರಡಿಸಿಬಿಟ್ಟನು. ಆದರೆ ಈ ಕಥಾಭಾಗವೆಲ್ಲವನ್ನೂ ಸವಿಸ್ತಾರವಾಗಿ ವರ್ಣಿಸುವುದರ ಮೊದಲು ಗ್ರೀಕರೆಂದರಾರು? ಅವರು ಈ ದೇಶಕ್ಕೆ ಹೇಗೆ ಬಂದರು? ಎಂಬುದನ್ನು ಸಂಗ್ರಹವಾಗಿ ಹೇಳಬೇಕಾಗಿದೆ.

ಸಿಂಧುನದಿಗೆ ಆಚೆಯಲ್ಲಿರುವ ಸುಲೇಮಾನ್ ಹಾಲಾಪರ್ವತಗಳ ಗಡಿಯಿಂದ ಪ್ರಾರಂಭವಾಗಿ, ಒರಸೆಯಾಗಿ ಪಶ್ಚಿಮದಲ್ಲಿ ಅಫಘಾನಿಸ್ಥಾನ, ಬಲೂಚಿಸ್ಥಾನ, ಪರ್ಷಿಯ, ಆಸಿಯದ ತುರ್ಕಿ, ಯುರೋಪಿನ ತುರ್ಕಿ ಎಂಬ ಹೆಸರುಗಳಿಂದ ಕರೆಯಲ್ಪಡುವ ಭೂಭಾಗವೆಲ್ಲ ನಮ್ಮ ಕಥೆಯ ಕಾಲದಲ್ಲಿ ಪಾರಸೀಕವಾಗಿದ್ದಿತು. ಅಂತಹ ಪಾರಸೀಕಕ್ಕೆ ಪಶ್ಚಿಮಮೇರೆಯಲ್ಲಿ ಮಕಡೋನಿಯವೆಂಬ ರಾಜ್ಯವಿದ್ದಿತು. ಗ್ರೀಸು ಈ ಮಕಡೋನಿಯಕ್ಕೆ ದಕ್ಷಿಣದಲ್ಲಿರುವ ದೇಶವು ಅಲ್ಲಿಯ ಜನರೇ ಗ್ರೀಕರು. ಹೀಗೆ ಗ್ರೀಕ ಮಕಡೋನಿಯದೇಶಗಳಿಗೂ, ಹಿಂದೂದೇಶಕ್ಕೂ ಮಧ್ಯದಲ್ಲಿದ್ದುದು ಪೂರ್ವಕಾಲದಲ್ಲಿ ಪಾರಸೀಕವೊಂದೇ. ಇದರಲ್ಲಿ ದಕ್ಷಿಣಸಮುದ್ರದಿಂದ ಗೆಡ್ರೋಸಿಯ, ಅರಕೋಸಿಯ, ಪರೋಪಮಿಶದ, ಬಾಕ್ಟ್ರಿಯಾನ, ಸಾಗ್ಡಿಯಾನಗಳು ಕ್ರಮವಾಗಿ ಉತ್ತರಕ್ಕೆ ವ್ಯಾಪಿಸಿದ್ದುವು. ಇವುಗಳೊಳಗೆ ಗೆಡ್ರೋಸಿಯ, ಅರಕೋಸಿಯ, ಪರೋಪಮಿಶದಗಳು ಈಗಳಿನ ಕಾಲದಲ್ಲಿ ಬಲೂಚಿಸ್ಥಾನ, ಅಫಘಾನಿಸ್ಥಾನಗಳೆಂದು ಕರೆಯಲ್ಪಡುತ್ತಿವೆ. ಬಾಕ್ಟ್ರಿಯಾನ, ಸಾಗ್ಡಿಯಾನಗಳು ಈಗ ಬೊಖಾರಾ, ಸಮರಖಂಡಗಳೆಂದೂ, ಭಾರತದಲ್ಲಿ ಬಾಹ್ಲೀಕವೆಂದೂ ಪ್ರಕಟವಾಗಿವೆ. ಪರೋಪಮಿಶದ ಬಾಕ್ಟ್ರಿಯಾನಗಳ ಮಧ್ಯ ಹಿಂದೂಕುಶಪರ್ವತಗಳೂ, ಬಾಕ್ಟ್ರಿಯಾನ ಸಾಗ್ಡಿಯಾನಗಳಿಗೆ ನಡುವೆ ಉಕ್ಷನದಿಯೂ ಇರುವುದು. ಸಾಗ್ಡಿಯಾನದೇಶಕ್ಕೆ ದಕ್ಷಿಣದಲ್ಲಿ ಉಕ್ಷನದಿಯೂ, ಉತ್ತರಕ್ಕೆ ಜಕ್ಸಾರ್ಟಿಸ್‌ನದಿಯೂ ಹರಿಯುತ್ತಿವೆ. ಅರಕೋಷ್ಯಕ್ಕೆ ಪಶ್ಚಿಮದಲ್ಲಿ ಡ್ರಾಂಗಿಯಾನ, ಪರೋಪಮಿಶದಕ್ಕೆ ಪಶ್ಚಿಮದಲ್ಲಿ ಅರ್‍ರಿಯ, ಬಾಕ್ಟ್ರಿಯಕ್ಕೆ ಪಶ್ಚಿಮದಲ್ಲಿ ಮಾರ್ಗಿಯಾನದೇಶಗಳೂ ಇವೆ. ಗೆಡ್ರೋಶಿಯದೇಶದ ಪಶ್ಚಿಮಕ್ಕೆ ಕಾರ್ಮಾನಿಯ ಪೆರ್ಶಿಸ್‌ದೇಶಗಳೂ, ಇವುಗಳ

ಉತ್ತರಕ್ಕೆ ಎಡಾರಿಯೂ ಇದಕ್ಕೆ ಉತ್ತರದಲ್ಲ ಒರಸೆಯಾಗಿ ಪಾರ್ಥಿಯ, ಹುರ್ಕೇನಿಯದೇಶಗಳೂ ವ್ಯಾಪಿಸಿ, ಕಶ್ಯಪಸಮುದ್ರಕ್ಕೆ ತಗಲುತ್ತವೆ. ಪಾರ್ಥಿಯ, ಹುರ್ಕೇನಿಯಗಳ ಪಶ್ಚಿಮಕ್ಕೂ ಕಶ್ಯಪಸಮುದ್ರಕ್ಕೆ ದಕ್ಷಿಣ ಮತ್ತು ಪಶ್ಚಿಮದಿಕ್ಕಿನಲ್ಲಿ ಮಧ್ಯದೇಶವೂ ಇದೆ, ಮಧ್ಯದೇಶದ ದಕ್ಷಿಣಕ್ಕೆ ಸೂಸಿಯಾನ ಎಂಬ ಸೀಮೆಯಿದೆ. ಈ ದೇಶಗಳೆಲ್ಲವೂ ಕಲೆತು, ಈಗಿನ ಪರ್ಷಿಯದೇಶವಾಗುವುದು. ಇಂತಹ ದೇಶಕ್ಕೆ ಪಶ್ಚಿಮದಲ್ಲಿ ಟೈಗ್ರಿಸ್‌ನದಿಯು ಪ್ರವಹಿಸುತ್ತಿದೆ. ಟೈಗ್ರಿಸ್ ನದಿಮೊದಲುಗೊಂಡು ಸಿಂಧುನದಿಯವರೆಗೂ, ಪಾರಸೀಕ ಅರಬಿಸಮುದ್ರಗಳಿಂದ ಮೊದಲು ಕಾಕಸ ಪರ್ವತಗಳು ಕಶ್ಯಪಸಮುದ್ರ, ಜಕ್ಸಾರ್ಟಿಸ್‌ನದಿಯವರೆಗೂ, ವ್ಯಾಪಿಸಿರುವ ಭೂಭಾಗಕ್ಕೆ ಅತಿ ಪ್ರಾಚೀನಕಾಲದಲ್ಲಿ ಐರಾನ್ ಎಂದರೆ ಆರ್ಯಾವರ್ತವೆಂಬ ಹೆಸರು. ಈ ಆರ್ಯರೇ ಕ್ರಮವಾಗಿ ಪ್ರಜಾಧನಬಲಗಳಲ್ಲ ಪ್ರಬಲಿಸಿ, ನಾನಾ ದಿಗ್ದೇಶಗಳನ್ನು ವ್ಯಾಪಿಸಿ ಇಂದಿಗೂ ಭೂತಲವಾಸಿಗಳಲ್ಲಿ ಅತ್ಯಂತ ಬುದ್ಧಿಭುಜಬಲಾಢ್ಯರಾಗಿ ಶೋಭಿಸುತ್ತಿರುವರು. ಆಗಲಿ. ನಾವು ವಿಷಯವನ್ನು ಅನುಸರಿಸೋಣ.

ಗ್ರೀಸುದೇಶಕ್ಕೂ ಹಿಂದೂದೇಶದ ಸಿಂಧೂನದಕ್ಕೂ ದೂರವು ಸುಮಾರು ನಾಲ್ಕುಸಾವಿರ ಮೈಲುಗಳಿರಬಹುದು. ಗ್ರೀಸ್‌ದೇಶದವರನ್ನು ಗ್ರೀಕರೆಂದು ಕರೆಯುವರು. ಇವರನ್ನು ನಮ್ಮ ಪೂರ್ವಿಕರು ಮ್ಲೇಚ್ಛರೆಂತಲೂ, ಯವನರೆಂತಲೂ ಕರೆದಿರುವರು. ಈ ಪದಗಳಿಗೆ, ಓದುವವರು ಮುಹಮ್ಮದೀಯರೆಂದು ಅರ್ಥಮಾಡಕೂಡದು. ಏಕೆಂದರೆ, ನಾವು ಈಗ ಬರೆಯುತ್ತಿರುವ ಕಥೆಯು ಮುಹಮ್ಮದನು ಹುಟ್ಟುವುದಕ್ಕೆ ಮೊದಲೇ ನಡೆದಿದೆ. ಈ ವೃತ್ತಾಂತವು ನಡೆದ ತರುವಾಯ ೯೦೦ ವರುಷಗಳಿಗೆ ಮುಹಮ್ಮದನು ಹುಟ್ಟಿದನು. ಗ್ರೀಕರು ಮಹಾಬಲಾಢ್ಯರು. ಮಗಧದೇಶವನ್ನು ನಂದರು ಆಳುತ್ತಿರುವಾಗ ಗ್ರೀಸುದೇಶವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದ ಅಲೆಗ್ಝಾಂಡರನೆಂಬೊಬ್ಬ ಮಹಾವೀರನು ಕ್ರಿ. ಪೂ. ೩೫೬ರಲ್ಲಿ ಮಕಡೋನಿಯದೇಶದಲ್ಲಿ ಜನ್ಮವೆತ್ತಿದನು.



## ಅಲೆಗ್ಝಾಂಡರನ ದಂಡಯಾತ್ರೆ.

ಈತನು ಅನೇಕ ದೇಶಗಳನ್ನು ಜಯಿಸಿ, ಪಾರಸೀಕದೇಶವನ್ನು ಸ್ವಾಧೀನಪಡಿಸಿಕೊಂಡ ತರುವಾಯ, ಹಿಂದೂದೇಶದ ಮೇಲೆ ದಂಡೆತ್ತಿಬಂದನು. ಈತನು

ಕ್ರಿ. ಪೂ. ೩೨೭ನೇ ವರುಷದ ಮೇ ತಿಂಗಳ ಮೊದಲುಗೊಂಡು ಕ್ರಿ. ಪೂ. ೩೨೪ನೆಯ ಮೇಯುವರೆಗೆ ಎಂದರೆ, ಮೂರು ವರುಷಗಳ ವರೆಗೆ ಪಂಜಾಬು ಸಿಂಧೂದೇಶಗಳ ಲ್ಲಿದ್ದು ಅನೇಕ ಚಿಕ್ಕ ಚಿಕ್ಕ ರಾಜ್ಯಗಳನ್ನು ಜಯಿಸಿದನು. ಈತನಿಗೆ ಅಷ್ಟರಲ್ಲಿ ವಶ ರಾದ ದೊಡ್ಡರಾಜರಲ್ಲಿ ಮೊದಲನೆಯವನು ತಕ್ಷಶಿಲಾನಗರಾಧೀಶ್ವರನು. ತಕ್ಷಶಿಲಾ ರಾಜ್ಯವು ಸಿಂಧೂ, ಜೀಲಮ್‌ನದಿಗಳ ಮಧ್ಯದಲ್ಲಿದ್ದು ಪೂರ್ವದಲ್ಲಿ ಪ್ರಖ್ಯಾತಿ ಪಡೆದಿದ್ದಿತು. ಬೌದ್ಧರ ಕಾಲದಲ್ಲಿ ತಕ್ಷಶಿಲಾನಗರವು ಸಕಲ ವಿದ್ಯೆಗಳಿಗೂ ತವರು ಮನೆಯಾಗಿ ಒಪ್ಪುತಿದ್ದಿತು. ಅಲೆಗ್ಸಾಂಡರನು ಸಿಂಧುನದಿಯ ಪೂರ್ವಭಾಗದಲ್ಲಿ ಇಳಿದಿದ್ದಾಗಲೇ ತಕ್ಷಶಿಲಾರಾಜನಾದ ಅಂಭೀ ಎಂಬವನು ಏಳುನೂರು ಕುದುರೆಗ ಳನ್ನೂ, ಮೂವತ್ತು ಆನೆಗಳನ್ನೂ, ಮೂರುಸಾವಿರ ಬೆಳೆದ ಎತ್ತುಗಳನ್ನೂ, ಹತ್ತುಸಾವಿರ ಕೊಬ್ಬಿದ ಟಗರುಗಳನ್ನೂ ಕಾಣಿಕೆಯಾಗಿ ತೆಗೆದುಕೊಂಡು ಹೋಗಿ, ಅಲೆಗ್ಸಾಂಡರನಿಗೆ ಶರಣಾಗತನಾದನು. ಹೀಗೆ ಪಂಜಾಬುದೇಶದ ಒಬ್ಬ ದೊಡ್ಡ ಅರಸನೇ ಅಲೆಗ್ಸಾಂಡರನ ವಶನಾದುದರಿಂದ, ಆತನ ಸಹಾಯದಿಂದ ಅಲೆಗ್ಸಾಂಡರನು ಅನೇಕ ದೇಶೀಯ ರಾಜರನ್ನು ಓಡಿಸಲು ಸಮರ್ಥನಾದನು.

ಅಲೆಗ್ಸಾಂಡರನು ಸಿಂಧುನದದ ಮೇಲೆ ಓಹಿಂದ್ ಎಂಬ ಸ್ಥಳದಾಚೆಗೆ, ತೆಪ್ಪ ವನ್ನು ಕಟ್ಟಿ, ದಾಟಿ, ತಕ್ಷಶಿಲಾರಾಜ್ಯಕ್ಕೆ ಬಂದು ಅಲ್ಲಿಯ ರಾಜನಿಂದ ವಿಶೇಷ ಗೌ ರವವನ್ನು ಹೊಂದಿದನು. ಅಲ್ಲಿಂದ ಅವನು ತಕ್ಷಶಿಲಾಸೈನ್ಯಗಳನ್ನು ಕೂಡ ಹಿಂದಿಟ್ಟುಕೊಂಡು ಪೋರಸನ ರಾಜ್ಯದಮೇಲೆ ದಂಡೆತ್ತಿಹೋದನು. ಜೀಲಂ ಚೀನಾಬ್‌ನದಿಗಳ ನಡುವೆ ಪೋರಸರೆಂಬ ಪೌರುಷಪ್ರಧಾನರು ಆಗ ರಾಜ್ಯವಾಳು ತಿದ್ದರು. ಗ್ರೀಕಚರಿತ್ರಕಾರರು ಈ ರಾಜರುಗಳ ಹೆಸರನ್ನು ಪೋರಸ್ ಎಂಬದಾಗಿ ಬರೆದಿರುವರು. ಈ ಪದವು ಪೌರವಸದ ದ್ಯೋತಕವೆಂಬುದಾಗಿ ಕೆಲವರೂ ಪುರು ಷೋತ್ತಮಪದದ್ಯೋತಕವೆಂಬುದಾಗಿ ಮತ್ತೆ ಕೆಲವರೂ ಬರೆದಿರುವರು. ಅಂದಿನ ಪೌರವರಾಜನು ಹೂಣನಾದ ಅಲೆಗ್ಸಾಂಡರನನ್ನು ಜೀಲಮ್ ನದಿಯ ಹತ್ತಿರ ತನ್ನ ಚತುರಂಗಸೇನೆಯೊಡನೆ ಇದಿರಿಸಿದನು. ಈಗ ಚಿಲಿಯಾನ್‌ವಾಲಾ ಎಂದು ಕರೆಯಲ್ಪಡುವ ಮೈದಾನಿಗೆ ಪಶ್ಚಿಮದಲ್ಲಿ ಹದಿನಾಲ್ಕು ಮೈಲು ದೂರದಲ್ಲಿ ನದಿಯ ತೀರದಲ್ಲಿ ಘೋರವಾದ ಯುದ್ಧವು ನಡೆಯಿತು. "ಮನೆಯ ಗುಟ್ಟು ಲಂಕೆಗೆ ಕೇಡು," ಎಂಬಂತೆ ಈ ಯುದ್ಧದಲ್ಲಿ ತಕ್ಷಶಿಲಾರಾಜರು ತಮ್ಮ ಸ್ವದೇಶದವನಾದ ಪುರುಷೋತ್ತಮನಿಗೆ ಸಹಾಯಮಾಡುವ ಬದಲಾಗಿ ದೇಶಘ್ನರಾಗಿ ತಮ್ಮಸೈನ್ಯದೊ ಡನೆ ಅಲೆಗ್ಸಾಂಡರನ ಪಕ್ಷವಾಗಿ ಹೋರಾಡಿದರು. ಆದರಿಂದಲೂ, ಪುರುಷೋ ತ್ತಮನ ರಥಗಳು ನದಿಯತೀರದಲ್ಲಿ ಇಳಿಯಬಿದ್ದುದರಿಂದಲೂ, ಅವನ ಆನೆಗಳು

ತಿರುಗಿಬಿದ್ದು ಆತನ ಸೈನ್ಯವನ್ನೇ ನಾಶಮಾಡಿದುದರಿಂದಲೂ, ಅಲೆಗ್ಝಾಂಡರನ ಸೈನ್ಯಗಳು ಪುರುಷೋತ್ತಮನ ಸೈನ್ಯಗಳಿಗಿಂತ ಹೆಚ್ಚಾಗಿದ್ದುದರಿಂದಲೂ ಆತನಿಗೆ ಪರಾಭವವುಂಟಾಗಿ ಅಲೆಗ್ಝಾಂಡರನಿಗೇ ಜಯವುಂಟಾಯಿತು.

ಅಲೆಗ್ಝಾಂಡರನು ಪಂಜಾಬುದೇಶದಲ್ಲಿಯೂ, ಸಿಂಧುದೇಶದಲ್ಲಿಯೂ ಎರಡು ವರುಷಗಳ ಕಾಲ ಇದ್ದನು. ಅಷ್ಟರಲ್ಲಿ ಉತ್ತರಪಂಜಾಬಿನಲ್ಲಿ ತಕ್ಷಶಿಲಾ (ಡೇರಿಷಹಾನ್) ನಿಕಾಯ (ಮೂಂಗ್); ದಕ್ಷಿಣಪಂಜಾಬಿನಲ್ಲಿ ಅಲೆಗ್ಝಾಂಡ್ರಿಯಾ (ವುಚ್); ಸಿಂಧುದೇಶದಲ್ಲಿ ಪಾಟಲ (ಹೈದರಾಬಾದ್); ಎಂಬ ಸ್ಥಳಗಳ ರಾಜರನ್ನು ತನಗೆ ಅಧೀನರನ್ನಾಗಿ ಮಾಡಿಕೊಂಡನು. ಮತ್ತು ತನ್ನ ಸೈನ್ಯದ ಸ್ವಲ್ಪ ಭಾಗವನ್ನು ಅಲ್ಲಲ್ಲಿ ಇರಿಸಿದನು.

ಆತನಿಗೆ ಹಿಂದೂದೇಶವೆಲ್ಲವನ್ನೂ ಜಯಿಸಬೇಕೆಂಬ ಕೋರಿಕೆಯಿದ್ದಿತಾದರೂ ಆತನ ಸೈನ್ಯಗಳು ಬೀಯಾಸ್ (ವಿಪಾಶ) ನದಿಯನ್ನು ದಾಟುವುದಕ್ಕೆ ಸಮ್ಮತಿಸದೆ ತಿರುಗಿಬಿದ್ದುದರಿಂದ, ಆತನು ಕ್ರಿ. ಪೂ. ೩೨೫ರಲ್ಲಿ ಹಿಂತಿರುಗಿ ಹೋಗಬೇಕಾಗಿ ಬಂದಿತು. ಹೀಗಾಗಿ ತಾನು ಪಂಜಾಬುದೇಶದಲ್ಲಿ ಸಂಪಾದಿಸಿದ ರಾಜ್ಯವನ್ನು ಕಾಪಾಡುವುದಕ್ಕೆ ಅಧಿಕಾರಿಗಳನ್ನು ನಿಯಮಿಸಿ ಆತನು ಹೊರಟುಹೋದನು.



## ಚಂದ್ರಗುಪ್ತನು ಅಲೆಗ್ಝಾಂಡರನನ್ನು ನೋಡುವುದು.

ಹೀಗೆ ನಮ್ಮ ಕಥಾನಾಯಕನಾದ ಚಂದ್ರಗುಪ್ತನು ಚಿಕ್ಕವನಾಗಿದ್ದಾಗ ಪಂಜಾಬುದೇಶವೆಲ್ಲವೂ ಗ್ರೀಕ್‌ದೇಶದವರಿಂದ ಆಕ್ರಮಿಸಲ್ಪಟ್ಟಿದ್ದಿತು. ನಂದವೈರವೇ ಕಾರಣವಾಗಿ ಚಂದ್ರಗುಪ್ತನು ಪಾಟಲೀಪುರದಿಂದ ಓಡಿಹೋಗಿ ಪಂಜಾಬು ಪ್ರಾಂತದಲ್ಲಿ ತಿರುಗುತ್ತ ಅಲೆಗ್ಝಾಂಡರನ ಹತ್ತಿರಕ್ಕೆ ಬಂದು ಆತನನ್ನು ನೋಡಿದಂತೆಯೂ, ನಂದರು ಸರ್ವಜನವಿರೋಧಿಗಳಾದುದರಿಂದ ಅವರನ್ನು ಓಡಿಸಿ ಮಗಧವನ್ನಾಕ್ರಮಿಸುವುದು ಮಹಾಸುಲಭಕಾರ್ಯವೆಂದು ಗ್ರೀಕಯೋಧಶ್ರೇಷ್ಠನಿಗೆ ಚಂದ್ರಗುಪ್ತನು ಮಂತ್ರಾಲೋಚನೆಯನ್ನು ಹೇಳಿದಂತೆಯೂ, ಆವುದೋ ಒಂದು ಕಾರಣದಿಂದ ಅಲೆಗ್ಝಾಂಡರನಿಗೆ ಚಂದ್ರಗುಪ್ತನ ಮೇಲೆ ಆಗ್ರಹವುಂಟಾಗಿ ಅವನನ್ನು ಹಿಡಿಯಲಾಜ್ಞಾಪಿಸಲು, ಅವನು ಪರ್ವತಪ್ರಾಂತಗಳಿಗೆ ಓಡಿಹೋದಂತೆಯೂ ಪ್ಲೂಟಾರ್ಕನು ಬರೆದಿರುವನು. ಈ ಮಾತೇ ನಿಜವಾದಲ್ಲಿ ಚಂದ್ರಗುಪ್ತನು

ಇಪ್ಪತ್ತೈದು ವರ್ಷ ವಯಸ್ಸನ್ನು ಮೀರದಾಗಲೇ ಅಲೆಗ್ಝಾಂಡರನು ನಮ್ಮ ದೇಶದ ಮೇಲೆ ದಂಡೆತ್ತಿ ಬಂದನೆಂದು ನಾವು ಊಹಿಸಬಹುದು. ಆದರೂ ಅಲೆಗ್ಝಾಂಡರನೊಡನೆ ಆತನಿಗೆ ಮನಸ್ತಾಪವುಂಟಾಗಲು ಕಾರಣವೇನೆಂಬುದನ್ನು ನಾವು ಊಹಿಸಲಾರೆವು.

ಮೂರುಲಕ್ಷ ಸೈನ್ಯದ ವ್ಯೂಹಗಳನ್ನೂ, ಮಗಧಾಧೀಶನ ಏಕಚ್ಛತ್ರಾಧಿಪತ್ಯವನ್ನೂ, ಮಹಾಪದ್ಮನ ಧನಜನಾದಿ ವೈಭವಗಳನ್ನೂ ನೋಡಿದ ಚಂದ್ರಗುಪ್ತನ ಕಣ್ಣುಗಳಿಗೆ ಅಲೆಗ್ಝಾಂಡರನ ೫೦,೦೦೦ ಸೈನ್ಯವೂ, ಧನಬಲವೂ, ಅಲ್ಪವಾಗಿ ತೋರಿತೇ? ಅಲೆಗ್ಝಾಂಡರು ಚಂದ್ರಗುಪ್ತರ ಪರಸ್ಪರ ಮರ್ಯಾದೋಪಚಾರಗಳಲ್ಲಿ ಹೆಚ್ಚುಕಡಿಮೆ ಬಂದಿತೇ? ಗಾಂಗೇಯಸೀಮೆಗೆ ಬಾರದೇ ಸ್ವದೇಶಪ್ರಯಾಣೋನ್ಮುಖನಾದ ಗ್ರೀಕವೀರನನ್ನು ನೋಡಿ ಮೌರ್ಯನು ಪರಿಹಾಸಮಾಡಿದನೇ? ಸಹಾಯವಿತ್ತು ಗಾಂಗೇಯಭೂಮಿಯನ್ನು ಸಾಧಿಸಿಕೊಡಬೇಕಾಗಿ ಕೋರಿದಲ್ಲಿ ತನಗೆ ಭವ್ಯತೆಯನ್ನು ತೋರಿಸೆಂದು ಕೇಳಿದ ಚಂದ್ರಗುಪ್ತನ ಮೇಲೆ ಕೋಪಗೊಂಡನೇ? ಸಾಮಾನ್ಯ ಸಂಭಾಷಣೆಯಲ್ಲಿಯೇ ಚಂದ್ರಗುಪ್ತನ ಸ್ವಸಾಮ್ಯತಾಗೌರವಭಾವಗಳಿಗೆ ಅಲೆಗ್ಝಾಂಡರನು ತಡೆಯಲಾರದೆ ಹೋದನೇ?—ಇವೆಲ್ಲವೂ ಯೋಚಿಸತಕ್ಕ ವಿಷಯಗಳಾಗಿವೆ.



## ಚಂದ್ರಗುಪ್ತನು ಸ್ವತಂತ್ರನಾಗುವುದು.

ಹಿಂದೆ ವರ್ಣಿಸಿದಂತೆ ಗ್ರೀಕ್‌ದೇಶದವನಾದ ಅಲೆಗ್ಝಾಂಡರನು ಪಂಜಾಬು ದೇಶದಲ್ಲಿ ಕೊಂಚರಾಜ್ಯವನ್ನು ಸಂಪಾದಿಸಿ, ಅದರ ರಕ್ಷಣೆಗಾಗಿ ಕೆಲವು ಸೈನಿಕರನ್ನು ಅಲ್ಲಲ್ಲಿರಿಸಿ ಹೋದ ತರುವಾಯ ಅವರನ್ನು ಓಡಿಸಿ, ಆ ರಾಜ್ಯವನ್ನು ತಾನು ಆಕ್ರಮಿಸಬೇಕೆಂದು ಚಂದ್ರಗುಪ್ತನು ಪ್ರಯತ್ನಮಾಡತೊಡಗಿದನು.

ಮಹಾವೀರನಾದ ಈತನು ಸಮಯವನ್ನು ಸಾಧಿಸಿ, ವಾಯುವ್ಯಪ್ರಾಂತಗಳಲ್ಲಿಯ ಯುದ್ಧಪ್ರಿಯರಾದ ಭಟರನ್ನೂ, ಅರಾಟ್ಟುಗಳನ್ನೂ ಕೂಡಿಕೊಂಡು, ಉಳಿದಿದ್ದ ಗ್ರೀಕ್ ದಳಗಳನ್ನು ವಿದಳನ ಮಾಡಿ, ಸೈನ್ಯಬಲಗಳನ್ನು ದಿನದಿನಕ್ಕೆ ವೃದ್ಧಿ ಮಾಡಿಕೊಂಡು, ಪ್ರಾಂತಸೀಮೆಗಳಿಗೆಲ್ಲ ಅಧಿಕಾರಿಯಾದನು. (ಕ್ರಿ. ಪೂ. ೩೨೨.)
*ಅರಾಟ್ಟುಗಳೆಂದರೆ ಪಂಜಾಬು ನಿವಾಸಿಗಳೂ, ಕಳ್ಳಕಾಕರೂ ಎಂದು ಭಾರತದಲ್ಲಿ

---

*ಅರಾಟ್ಟುಗಳು, ಅರಾಷ್ಟ್ರರು ಎಂಬ ಪದಗಳನ್ನು ಗ್ರೀಕ್‌ಚರಿತ್ರಕಾರರು ಚೋರಾರ್ಥದಲ್ಲಿ ಉಪಯೋಗಿಸಿರುವರು.

ದೂಷಿಸಲ್ಪಟ್ಟಿರುವರು. ಕತೀಯರೂ ಹಾಗೆಯೇ ದೂಷಿಸಲ್ಪಟ್ಟಿರುವರು. ಆದರೆ ಈ ಅರಾಟ್ಟ್ರಗಳ ಸೀಮೆಗಳು ಪ್ರಜಾಸಭೆಗಳಿಂದ ಪಾಲಿತವಾಗಿ, ರಾಜರಿಗೆ ಅಧಿಕಾರವನ್ನು ಕೊಡದೆ ಸ್ವತಂತ್ರಜನಪೂರಿತವಾಗಿದ್ದಂತೆ ತೋರುವುದು.

ಮಹಮ್ಮದೀಯ ಚರಿತ್ರದಲ್ಲಿ ಅಕ್ಬರನು ತುಂಡುತುಂಡಾಗಿ ಚದರಿದ್ದ ದೇಶಭಾಗಗಳೆಲ್ಲವನ್ನೂ ತನ್ನ ಆಜ್ಞೆಯಲ್ಲಿಟ್ಟುಕೊಂಡು ಚಕ್ರವರ್ತಿತ್ವವನ್ನು ಹೊಂದಿದಂತೆ, ಆತನಿಗೆ ೧೯೦೦ ವರುಷಗಳ ಮೊದಲು, ಚದರಿಕೊಂಡಿದ್ದ ಸಾಮಂತಪ್ರಭುತ್ವಗಳನ್ನೆಲ್ಲ ಚಂದ್ರಗುಪ್ತನು ಏಕಾಜ್ಞಾಚಕ್ರಕ್ಕೆ ವಶಪಡಿಸಿಕೊಂಡು ಮಗಧಾಧೀಶನಾದನೆಂದು ಹೇಳಬಹುದು.

ಚಂದ್ರಗುಪ್ತನು ಹೀಗೆ ಗ್ರೀಕರನ್ನು ಅಟ್ಟಿ, ಪಂಜಾಬುದೇಶವೆಲ್ಲವನ್ನೂ ಆಕ್ರಮಿಸಿಕೊಂಡು, ನಂದರನ್ನು ಓಡಿಸಿ ಮಗಧರಾಜ್ಯವನ್ನು ಸಂಪಾದಿಸಿ, ಹಿಂದೂದೇಶವೆಲ್ಲಕ್ಕೂ ತಾನೇ ಏಕಚ್ಛತ್ರಾಧಿಪತಿಯಾಗಿರಲೆಣಿಸಿ ಸೈನ್ಯಗಳನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಿದನು. ಆತನ ಹತ್ತಿರ ಆರುಲಕ್ಷಗಳ ಕಾಲ್ಬಲವೂ, ಮೂವತ್ತುಸಾವಿರ ಕುದುರೆಗಳ ರಾವುತರೂ, ಒಂಭತ್ತುಸಾವಿರ ಆನೆಗಳೂ ಇದ್ದುವು. ಈ ಪ್ರಚಂಡವಾದ ಸೈನ್ಯದೊಡನೆ ಅವನು ಉತ್ತರ ಹಿಂದೂದೇಶದಲ್ಲಿಯ ಎಲ್ಲ ರಾಜ್ಯಗಳನ್ನು ಗೆದ್ದು, ನರ್ಮದಾ ಹಿಮಾಲಯಗಳು ದಕ್ಷಿಣೋತ್ತರದ ಎಲ್ಲೆಗಳಾಗಿಯೂ, ಪೂರ್ವಪಶ್ಚಿಮ ಸಮುದ್ರಗಳು ಆಯಾದಿಕ್ಕುಗಳ ಎಲ್ಲೆಗಳಾಗಿಯೂ ಇರುವ ಆರ್ಯಾವರ್ತಕ್ಕೆಲ್ಲ ಪ್ರಥಮಚಕ್ರವರ್ತಿಯಾದನು.

## ಸೆಲ್ಯೂಕಸನನ್ನು ಜಯಿಸುವುದು.

ಹಾಗೆ ಪಂಜಾಬಿನಿಂದ ಓಡಿಹೋದ ಗ್ರೀಕರಿಗೆ ಸೆಲ್ಯೂಕಸ್ ನಿಕೇಟರ್ ಎಂಬ ರಾಜನಿದ್ದನು. ಈತನು, ಮೊದಲು ಅಲೆಗ್ಝಾಂಡರನೊಡನಿದ್ದ ದೊಡ್ಡ ಸೇನಾನಿಗಳಲ್ಲೊಬ್ಬನು. ಅಲೆಗ್ಝಾಂಡರನು ಕಾಲಧರ್ಮವನ್ನು ಹೊಂದಿದ ತರುವಾಯ ಸೆಲ್ಯೂಕಸು ಕೆಲವು ದಿನಗಳ ವರೆಗೆ ಇತರ ಸೇನಾನಿಗಳೊಡನೆ ಹೋರಾಡಿ, ಆಸ್ಯಾಖಂಡದೊಳಗಣ ಪಶ್ಚಿಮಭಾಗಕ್ಕೂ ಮಧ್ಯಭಾಗಕ್ಕೂ ರಾಜನಾಗಿ ಬೆಬಿಲೋನ್ ಪಟ್ಟಣದಲ್ಲಿ ಕ್ರಿ.ಪೂ. ೩೧೨ರಲ್ಲಿ ಪಟ್ಟಾಭಿಷಿಕ್ತನಾದನು. ಅವನ ರಾಜ್ಯದ ಪೂರ್ವದಿಕ್ಕಿನ ಮೇರೆಯು ಹಿಂದೂದೇಶದಲ್ಲಿದ್ದುದರಿಂದ ಗ್ರೀಕರ ಪತಾಕೆಯನ್ನು ತಿರುಗಿ ಪಂಜಾಬುದೇಶದಲ್ಲಿ ಸ್ಥಾಪಿಸಲು ಯೋಚಿಸಿ ಅದರ ಮೇಲೆ ದಂಡೆತ್ತಿ ಬಂದನು. (ಕ್ರಿ. ಪೂ. ೩೦೫). ಅಂದಿಗೆ ಚಂದ್ರಗುಪ್ತನು ಸಿಂಹಾಸನವೇರಿ ಹದಿ

ನೈದು ವರ್ಷಗಳಾಗಿದ್ದುವು. ಆತನು ಪಂಜಾಬು ಸಿಂಧೂದೇಶಗಳನ್ನೂ, ಗುಜರಾತು ದೇಶವನ್ನೂ ಜಯಿಸಿ ವಶಪಡಿಸಿಕೊಂಡಿದ್ದನು. ಸೆಲ್ಯೂಕಸನಿಗೆ ಸಿಂಧುನದಿಯನ್ನು ದಾಟಲು ಅಡ್ಡಿಮಾಡದೆ, ಚಾಣಕ್ಯ ಚಂದ್ರಗುಪ್ತರು ಅತ್ಯಂತ ಚಾತುರ್ಯದಿಂದ ಅವನ ಸೈನ್ಯಗಳನ್ನೆಲ್ಲಾ ತಮ್ಮ ಸೈನ್ಯಗಳಿಂದ ಮುತ್ತಿ ಕಟ್ಟಿಬಿಟ್ಟರು.

ಇಂತಹ ಅವಸರದಲ್ಲಿ ಸೆಲ್ಯೂಕಸು ಯುದ್ಧಮಾಡಿ ಸೋತುಹೋಗಿ, ಶರಣಾಗತನಾದನೆಂದು ಕೆಲವರೂ; ಯುದ್ಧಮಾಡುವುದಕ್ಕೆ ಹೆದರಿ ತನ್ನ ದೌರ್ಬಲ್ಯವನ್ನು ನೋಡಿ ವೀರತ್ವಕ್ಕಿಂತ ವಿವೇಕವೇ ಮೇಲೆಂದು ನಿಶ್ಚಯಿಸಿ ಚಂದ್ರಗುಪ್ತನಿಗೆ ಶರಣಾಗತನಾದನೆಂದು ಮತ್ತೆ ಕೆಲವರೂ ಬರೆದಿರುವರು. ಆದರೆ ಸೆಲ್ಯೂಕಸು ಶರಣಾಗುವುದೂ, ಚಂದ್ರಗುಪ್ತನು ಅಭಯವನ್ನು ಕೊಡುವುದೂ ನಡೆಯುವುದಕ್ಕೆ ಮೊದಲೇ ತಮ್ಮ ಕೈಯಲ್ಲಿ ಸಿಕ್ಕಿದ ಮೆಸಿಡೋನಿಯ ಸೈನ್ಯಗಳ ಮೇಲೆ ಮಾಗಧಸೈನ್ಯಗಳು ಹಗೆತೀರಿಸಿಕೊಂಡುವೆಂಬುದಕ್ಕೆ ಸಂದೇಹವಿಲ್ಲ. (ಕ್ರಿ. ಪೂ. ೩೦೩).

ಚಂದ್ರಗುಪ್ತನು ಸೆಲ್ಯೂಕಸನೊಡನೆ ಒಡಂಬಡಿಕೆಯನ್ನು ಮಾಡಿಕೊಂಡು, ಗೆಡ್ರೋಸಿಯ ಅರಕೋಸಿಯ ಎಂದೆನಿಸುವ ಅಫಘಾನಿಸ್ಥಾನ ಬಲೂಚಿಸ್ಥಾನ ದೇಶಗಳನ್ನು ಕಿತ್ತುಕೊಂಡನು. ಈಗ ಆಂಗ್ಲೇಯರು ಪಶ್ಚಿಮೋತ್ತರ ಸಾಮಂತಸೀಮೆಗಳಲ್ಲಿ ಪರ್ವತರಕ್ಷಿತವಾಗಿ ಪರಶತ್ರುಗಳಿಗೆ ಅಭೇದ್ಯವಾಗಿರುವ ಮೇರೆಗಳು ತಮ್ಮ ಕೈಯಲ್ಲಿ ಸಿಕ್ಕಬೇಕೆಂದು ಯತ್ನಿಸುತ್ತಿರುವರು. ಮೊಗಲರಾಜರೂ ಪ್ರಯತ್ನಪಟ್ಟರು. ಆದರೆ ಇವರಾರಿಗೂ ಸಾಧ್ಯವಾಗಲಿಲ್ಲ. ಇಂತಹ ಮೇರೆಗಳು ೨೨೦೦ ವರ್ಷಗಳಿಗೆ ಮೊದಲೇ ನಮ್ಮ ದೇಶದ ಚಾರಿತ್ರಿಕ ಚಕ್ರವರ್ತಿಯಾದ ಚಂದ್ರಗುಪ್ತನ ಅಂಗೈಯ್ಯಲ್ಲಿ ಸೇರಿದ್ದುವೆಂಬುದು ನಮಗೆಷ್ಟೋ ಯಶಸ್ಕರವೂ ಆನಂದಕರವೂ ಆಗಿದೆ!

ಚಂದ್ರಗುಪ್ತನು ಸೆಲ್ಯೂಕಸನ್ನು ಅಷ್ಟರಲ್ಲಿಯೇ ಬಿಟ್ಟುಬಿಡಲಿಲ್ಲ. ಇಂತಹ ಸಂಧಿಯಲ್ಲಿ ಚಂದ್ರಗುಪ್ತನ ರಾಣಿಯು ಈ ಲೋಕವನ್ನು ಬಿಟ್ಟಳು. ಸೆಲ್ಯೂಕಸನ ಮಗಳು ಸುಂದರಿಯೂ, ಯುವತಿಯೂ, ನಿಪುಣೆಯೂ ಆಗಿದ್ದುದರಿಂದಲೂ, ಯವನರು ಇನ್ನುಮುಂದೆ ಶತ್ರುತ್ವವನ್ನು ಯೋಚಿಸದಿರುವಂತೆ ತಕ್ಕವಸ್ತುವನ್ನು ವಿಶ್ವಾಸಸ್ಥಾನದಲ್ಲಿ ಇರಿಸಿಕೊಳ್ಳಬೇಕೆಂತಲೂ, ಯಾದವ ಪಾಂಡವರ, ವಿರಾಟಪಾಂಡವರ ಬಾಂಧವ್ಯದಂತೆಯೇ ಆ ಕಾಲದಲ್ಲಿ ನಂಟುತನವು ಗೆಳೆತನಕ್ಕೆ ಆಧಾರವಾಗಿ ಭಾವಿಸಲ್ಪಟ್ಟುದರಿಂದಲೂ, ಚಾಣಕ್ಯನ ಮಂತ್ರಾಲೋಚನೆಯನ್ನು ಅಂಗೀಕರಿಸಿ, ಚಂದ್ರಗುಪ್ತನು ಆಕೆಯನ್ನು ತನಗೆ ಭಾರ್ಯೆಯನ್ನಾಗಿ ಅವಳ ತಂದೆಯು ಸಮರ್ಪಿಸುವಂತೆ ಮಾಡಿದನು. ಇದಾದಮೇಲೆ ಆ ಗ್ರೀಕನಾಯಕನು ತನಗೆ ೫೦೦ ಆನೆ

ಗಳು ಬೇಕಾಗಿವೆಯೆಂದು ಕೇಳಿಕೊಳ್ಳಲು, ಒಬ್ಬ ಗಜಗಮನೆಗೆ ಮೌಲ್ಯವಾಗಿ ೫೦೦ ಗಜಗಳನ್ನು ಕೊಡಬಹುದೆಂಬ ವಾಡಿಕೆಯನ್ನನುಸರಿಸಿ ಚಂದ್ರಗುಪ್ತನು ಮಾವನಿಗೆ ಬಹುಮಾನವಾಗಿ ಕಳುಹಿಸಿದನು. ಅಂದು ಚಂದ್ರಗುಪ್ತನ ಮೂಲಕ ತನಗೆ ಉಂಟಾದ ಕಿರುಕುಳಗಳು ಮನಸ್ಸಿನಲ್ಲಿ ನಾಟಿಕೊಂಡಿದ್ದುದರಿಂದ ಗ್ರೀಕರು ಈ ದೇಶದಮೇಲೆ ಪುನಃ ದಂಡೆತ್ತಿ ಬರುವುದನ್ನು ಕನಸಿನಲ್ಲಾದರೂ ಯೋಚಿಸಲಿಲ್ಲ. ಆದರೆ ಗ್ರೀಕರ ಅರಸುಮಗಳಲ್ಲದೆ, ಚಂದ್ರಗುಪ್ತನ ಮಹಿಷಿಗೆ ಪರಿವಾರವಾಗಿ ಅನೇಕ ಗ್ರೀಕರು ಪಾಟಲೀಪುರದಲ್ಲಿ ವಾಸವಾಗಿದ್ದರು. ಸೆಲ್ಯೂಕಸು ತನ್ನ ರಾಷ್ಟ್ರದ ಪಶ್ಚಿಮದಿಕ್ಕಿನಲ್ಲಿ ಆಂಟಿಗೋನಸ್ ಎಂಬ ವೈರಿಯು ಎದ್ದು ಉಪದ್ರವ ಮಾಡುವುದನ್ನು ಕೇಳಿ, ಕ್ರಿ. ಪೂ. ೩೦೩ರಲ್ಲಿ ಹೊರಟುಹೋದನು. ಆದರೆ ತನ್ನ ರಾಯಭಾರಿಯಾದ ಮೆಗಾಸ್ತನೀಸೆಂಬವನನ್ನು ನಿಯಮಿಸಿ ಪಾಟಲೀಪುರದಲ್ಲಿರುವಂತೆ ಹೇಳಿ, ನಿಲ್ಲಿಸಿದನು. ಈ ಮೆಗಾಸ್ತನೀಸನ ಪರಿವಾರಗಳೂ, ಆ ಗ್ರೀಕರಾಣಿಯ ಪರಿವಾರಗಳೂ, ಮೌರ್ಯಸೇನೆಯಲ್ಲಿ ಸೇರಿದ್ದ ಶಿಲ್ಪಿಗಳೂ, ಕೈಗಾರಿಕೆ ಕೆಲಸದವರೂ ಕೂಡಿ ಗ್ರೀಕರ ಒಂದು ಪೇಟೆಯೇ ಪಾಟಲೀಪುರದಲ್ಲಿದ್ದಂತೆ ಊಹಿಸತಕ್ಕುದೆಂದು ರ್‍ಹೈಸ್ ಡೇವಿಡ್ಸರ ಅಭಿಪ್ರಾಯವಿದೆ. ಇದರಿಂದ ನಮ್ಮ ದೇಶದ ಜನರಿಗೆ ಶಿಲ್ಪಾದಿಕೃತ್ಯಗಳು ತಿಳಿಯವೆಂದಲ್ಲ*. ನಮ್ಮವರ ವಿದ್ಯೆಗಳನ್ನು ಗ್ರೀಕರೂ, ಗ್ರೀಕರ ವಿದ್ಯೆಗಳನ್ನು ನಮ್ಮವರೂ ಕಲಿತಿರಬಹುದು.

ಅಲೆಗ್ಝಾಂಡರನಿಗೆ ಮೊದಲು ಭಾರತವರ್ಷವನ್ನು ಕುರಿತು, ಪಶ್ಚಿಮಖಂಡವಾಸಿಗಳಿಗೆ ನಿರ್ಣೀತ ಜ್ಞಾನವಿಲ್ಲದೆ, ಯಕ್ಷರಾಕ್ಷಸಾದಿ ಲೋಕಗಳಂತೆ ಏನೇನೋ ಕಥೆಗಳಿಗೆ ವಿಷಯವಾಗಿದ್ದಿತು. ಲೋಕವೆಲ್ಲವನ್ನೂ ಜಯಿಸುವ ಆಸಕ್ತಿಯುಳ್ಳವನಾಗಿ ಬಂದ ಅಲೆಗ್ಝಾಂಡರು ಆ ಕಾಲದಲ್ಲಿ ಗ್ರೀಕರಿಗೆ ಋಷಿಸ್ಥಾನದಲ್ಲಿದ್ದ ಅರಿಸ್ಟಾಟಲನ ಶಿಕ್ಷೆಯಲ್ಲಿಡಲ್ಪಟ್ಟು ವಿದ್ಯಾವಿನೀತನಾಗಿ ಬೆಳೆದಿದ್ದುದರಿಂದ ತಾನು ಆಕ್ರಮಿಸುವ ಸಮಸ್ತದೇಶಗಳ ಚರಿತ್ರೆ ಭೂಗೋಳ ಮೊದಲಾದ ವಿವರಗಳನ್ನು ಚೆನ್ನಾಗಿ ಬರೆಯತಕ್ಕ ಗ್ರೀಕ ವಿದ್ವಾಂಸರನ್ನು ಸಂಗಡ ಕರೆದುಕೊಂಡು ಬಂದನು. ಅಂತಹ ಪರಂಪರಾಪ್ರಾಪ್ತಬುದ್ಧಿಯಿಂದ ಮೆಗಾಸ್ತನೀಸು ತಾನಿದ್ದಷ್ಟುಕಾಲ ಕೇಳಿದುದನ್ನೂ, ನೋಡಿದುದನ್ನೂ ದಿನಚರ್ಯೆಯಾಗಿ ಬರೆದುಕೊಂಡು ಹೋದನು.

ಆ ದಿನಚರ್ಯೆಯಲ್ಲಿ ಪಾಟಲಿಪುತ್ರನಿರ್ಮಾಣಾದಿ ವಿವರಗಳನ್ನೂ, ಚಂದ್ರಗುಪ್ತರಾಜ್ಯಭಾರಾದಿ ವಿವರಗಳನ್ನೂ, ಆ ಕಾಲದಲ್ಲಿ ಆತನು ನೋಡಿದ ಮತ

---

*ಶಿಲ್ಪ ಮೊದಲಾದುವುಗಳಲ್ಲಿ ಹಿಂದೂಗಳ ಜ್ಞಾನಕ್ಕೆ ಮೆಗಾಸ್ತನೀಸು ಬೇಕಾದಷ್ಟು ದೃಢ ಸಾಕ್ಷ್ಯವನ್ನು ಕೊಟ್ಟಿರುವನು.

ವರ್ಣಾಶ್ರಮಾಚಾರ ವ್ಯವಹಾರಾದಿ ವಿವರಗಳನ್ನೂ, ದಕ್ಷಿಣಹಿಂದೂಸ್ಥಾನವೇ ಮೊದಲಾದ ತಾನು ನೋಡದ ಪ್ರದೇಶಗಳನ್ನು ಕುರಿತು ತಾನು ಕೇಳಿದ ವಿವರಗಳನ್ನೂ ವಂಚನೆಯಿಲ್ಲದೆ ಬರೆದಿರುವನು.

ಆತನು ಪಾಟಲೀಪುರದಲ್ಲಿದ್ದ ಎರಡು ವರ್ಷಗಳಲ್ಲಿಯೇ ಎಷ್ಟೋ ಬರೆದು ಸ್ವದೇಶಕ್ಕೆ ಪುಸ್ತಕರೂಪವಾಗಿ ಜ್ಞಾನವನ್ನು ತೆಗೆದುಕೊಂಡು ಹೋದನು. ಅದರೊಳಗಣ ವರ್ತಮಾನಗಳನ್ನು ಗ್ರೀಸ್ ಮತ್ತು ಇಟಲೀದೇಶದ ಚರಿತ್ರಕಾರರು ತಮ್ಮ ತಮ್ಮ ಚರಿತ್ರೆಗಳಿಗೆ ಸೇರಿಸಿಕೊಂಡು, ಒಪ್ಪುತಪ್ಪುಗಳನ್ನು ತಮ್ಮ ಮನಸ್ಸಿಗೆ ಬಂದಂತೆ ವಿಮರ್ಶೆಗಳಲ್ಲಿ ಸೇರಿಸಿ ಬರೆದಿಟ್ಟರು.

ಇಂತಹ ಈ ಚರಿತ್ರಾಂಶಗಳೇ ನಮ್ಮ ಹಿಂದೂದೇಶದ ಚರಿತ್ರೆಯ ವೃತ್ತಾಂತಗಳ ಕಾಲನಿರ್ಣಯಗಳನ್ನು ಮಾಡುವುದಕ್ಕೆ ಆಧಾರಗಳಾದುವು. ಭಾರತೀಯರ ನಾಗರಿಕತೆಯೂ, ಚರಿತ್ರೆಯೂ ಶ್ರುತಿ ಸ್ಮೃತಿ ಪುರಾಣೇತಿಹಾಸಗಳ ಮೂಲಕ ದೊರೆಯತಕ್ಕವುಗಳು ಅತ್ಯಂತ ಪ್ರಾಚೀನವಾಗಿ ೫,೦೦೦, ೧೦,೦೦೦, ೨೦,೦೦೦, ಮೊದಲಾಗುಳ್ಳ ಸಂವತ್ಸರಗಳ ಭೂತಕಾಲ ವ್ಯಾಪ್ತಗಳಾದರೂ, ಕಾಲನಿರ್ಣಯ ಪಟ್ಟಿಕಾರೂಪವಾಗಿ ಸೇರಿಸಿ ಬರೆಯದುದರಿಂದಲೂ ಅದ್ಭುತ ವಿಚಿತ್ರಗಳನ್ನು ಅತಿಶಯೋಕ್ತಿಗಳೊಡನೆ ಸೇರಿಸಿ ಬರೆದುದರಿಂದಲೂ ಚರಿತ್ರದೃಷ್ಟಿಗೆ ಅವು ಅವಿಶ್ವಸನೀಯಗಳಾಗಿವೆ. ಆದುದರಿಂದ ನಮ್ಮ ದೇಶದ ಗತ ೨,೫೦೦ ವರ್ಷಗಳ ವೃತ್ತಾಂತಗಳ ಪಟ್ಟಿಕೆಗೆ ಈ ಮೆಗಾಸ್ತನೀಸನ ದಿನಚರ್ಯೆಯು, ಸಮಸ್ತ ಚರಿತ್ರಕಾರರಿಗೂ ಅನಿವಾರ್ಯವಾದ ಆಧಾರವಾಗಿದೆ. ಈತನು ಸಾಂಡ್ರಕೋಟಸ್ ಎಂದು ಹೆಸರು ಹೇಳಿದ ನಾಮವು ಮೊದಲು ಅನರ್ಥನಾಮವಾಗಿಯೇ ತೋರಿತಾದರೂ, ಚಂದ್ರಗುಪ್ತಪದವು ಆ ಗ್ರೀಕನ ಬಾಯಲ್ಲಿ ಆರೀತಿ ಬದಲಾಯಿತೆಂದು ಸರ್ ವಿಲಿಯಂ ಜೋನ್ಸ್ ಎಂಬೊಬ್ಬ ಪಾಶ್ಚಾತ್ಯ ವಿದ್ವಾಂಸನು ವ್ಯಾಖ್ಯಾನವನ್ನು ಮಾಡಿದೊಡನೆಯೇ ಅಲ್ಲಿಂದ ಚರಿತ್ರಜ್ಞಾನಾಗ್ನಿಯು ಹಬ್ಬಿ ಇದು ಹೀಗೆಯೇ ಸರಿಯೆಂದು ತಿಳಿಯದ ಹಿಂದೂ ಚರಿತ್ರದ ವಾರ್ತಾಂಗಾರವನ್ನೆಲ್ಲ ಕೆರಳಿಸಿತು.

ಅಂತಹ ಅಗ್ನಿದಾಯಕನು ಈ ಮೆಗಾಸ್ತನೀಸು; ಅಂತಹ ಅಗ್ನಿಯು ಈ ಚಂದ್ರಗುಪ್ತ (ಸಾಂಡ್ರಕೋಟ್ಟಸ್) ನಾಮವು. ಆದುದರಿಂದ ನವನಂದರನ್ನು ಚಿತಿಯಲ್ಲಿ ದಗ್ಧವಾಗುವಂತೆ ಮಾಡಿದ ಆ ಚಂದ್ರಗುಪ್ತನ ಹೆಸರು, ಈ ಭಾರತ ಭೂಮಿಯ ದಿಗಂತಗಳಿಗೂ ವ್ಯಾಪಿಸಿದ ಪ್ರಥಮಚಕ್ರವರ್ತಿಯ ಯಶೋಗ್ನಿಯಾಗಿಯೂ, ಭಾರತಚರಿತ್ರಾಂಧಕಾರವನ್ನು ಕೊಂಚಮಟ್ಟಿಗಾದರೂ ತೊಲಗಿಸುತ್ತ

ಪುರಾಣಾತಿಶಯೋಕ್ತಿಗಹನವನ್ನು ಸುಟ್ಟುಬಿಡುವ ದಾವಾನಲವಾಗಿಯೂ ಪ್ರಜ್ವಲಿಸುತ್ತಿದೆ.

ಚಂದ್ರಗುಪ್ತನು ಮೊದಲೇ ಕೋಸಲ ರಾಜ್ಯವನ್ನು ತನ್ನ ಅಧೀನ ಮಾಡಿಕೊಂಡಿದ್ದನು. ಆತನು ತಾನಾಗಿಯೇ ಪಂಜಾಬನ್ನೂ, ಸಿಂಧುದೇಶವನ್ನೂ ಜಯಿಸಿದನು. ಪಂಜಾಬಿನಲ್ಲಿ ಸೈನ್ಯಶಿಥಿಲತೆಯುಂಟಾಗುತ್ತಲೇ ಚದರಿದ್ದ ಸೈನ್ಯವೆಲ್ಲವನ್ನೂ ತನ್ನ ಮೂಲಬಲವಾಗಿ ಮಾಡಿಕೊಂಡನು. ಅನಂತರ ಗುಜರಾತನ್ನು ಜಯಿಸಿ ಅಲ್ಲಿ ಒಬ್ಬ ರಾಜಪ್ರತಿನಿಧಿಯನ್ನು ನಿಯಮಿಸಿದಂತೆ ರುದ್ರದಾಮನ ಶಿಲಾಶಾಸನವು ಇಂದಿಗೂ ತಿಳಿಸುತ್ತಿದೆ. ಇದಕ್ಕೆ ಮೊದಲೇ ಅವನು ಅವಂತಿ (ಎಂದರೆ ಉಜ್ಜಯಿನಿ) ದೇಶವನ್ನು ಆಕ್ರಮಿಸಿ ವಶಮಾಡಿಕೊಂಡಿದ್ದನು.

ಎರಡುದಿಕ್ಕಿನಿಂದಲೂ ರಾಜ್ಯಾರೂಢನಾಗಿದ್ದ ಚಂದ್ರಗುಪ್ತನಿಗೆ ವಿಶ್ರಾಂತಿಗೆ ಸಮಯವು ದೊರೆಯಲಿಲ್ಲ. ವೃಷಲಜನನ ಕಲಂಕಕ್ಕೆ ವಿಷಯಭೂತನಾದುದರಿಂದಲೂ, ಧನನಂದನಿಂದ ಹೆಚ್ಚಾಗಿ ಪೀಡಿತರಾಗಿದ್ದ ಪ್ರಜೆಗಳಿಗೆ ಅರಸನಾದುದರಿಂದಲೂ, ನಂದಕುಲಾಭಿಮಾನಿಗಳಾದ ಜನರ ಮೋಸಮಾಯೆಗಳಿಗೆ ಲಕ್ಷ್ಯನಾದುದರಿಂದಲೂ, ಉನ್ನತ ಜಾತಿಯಲ್ಲಿ ಹುಟ್ಟದ ಸಾಮಂತರಾಜರ ಅವಜ್ಞಾವಿರೋಧಗಳಿಗೂ, ಅಲೆಕ್ಸಾಂಡರನ ಪಾಶ್ಚಾತ್ಯ ಸೇನಾನಾಯಕರ ಅಭಿಯೋಗಕ್ಕೂ ಆಸ್ಪದನಾದುದರಿಂದಲೂ, ತಾನೇ ಭಾರತ ಸರ್ವಸ್ವ ವಿಜಯಾ ಕಾಂಕ್ಷಿಯಾದುದರಿಂದಲೂ, ಜಯಿಸಿದ ರಾಷ್ಟ್ರಗಳನ್ನು ಸಮಾಧಾನಗೊಳಿಸಿ, ಪರಿಪಾಲನಾ ಸಂವಿಧಾನಗಳಲ್ಲಿ ಸಂಸ್ಕಾರಲಕ್ಷಣದೃಷ್ಟಿಯು ಸ್ವಾಭಾವಿಕವಾಗುಳ್ಳವನಾದುದರಿಂದಲೂ, ಒಂದೇಕಡೆ ಕುಳಿತುಕೊಳ್ಳುವುದಕ್ಕಾಗಲಿ, ನಿಲ್ಲುವುದಕ್ಕಾಗಲಿ, ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳುವುದಕ್ಕಾಗಲಿ, ವ್ಯವಧಿಯಿಲ್ಲದೆ, ಸದಾ ದುಷ್ಟನಿಗ್ರಹ ಶಿಷ್ಟಪರಿಪಾಲನೆಯಲ್ಲಿಯೇ ಜೀವಿತಕಾಲವೆಲ್ಲವನ್ನೂ ಕಳೆಯಬೇಕಾಗಿ ಬಂದಿತು. ಚಾರಿತ್ರಿಕ ವಿಷಯಗಳಿಗೆ ಅವಿಶ್ವಸನೀಯಗಳಾದ ಪುರಾಣೇತಿಹಾಸಾದಿ ವಿಷಯಗಳನ್ನು ಒತ್ತಟ್ಟಿಗಿಟ್ಟಲ್ಲಿ, ಭರತಖಂಡದ ಚಕ್ರವರ್ತಿಗಳಲ್ಲಿ ಈತನೇ ಮೊದಲನೆಯವನೆಂದು ಕಂಡುಬರುವುದು. ಸೇನೆಗಳನ್ನು ನಡೆಯಿಸುವುದು, ಶತ್ರುಗಳನ್ನಾಕ್ರಮಿಸುವುದು, ನೂತನ ದೇಶಗಳನ್ನು ಸಂಪಾದಿಸುವುದು, ನ್ಯಾಯಗಳನ್ನು ತೀರಿಸುವುದು, ನಗರಪಂಚಾಯತರು ಗ್ರಾಮಪಂಚಾಯಿತರು ಮೊದಲಾದವರನ್ನು ನಿಯಮಿಸುವುದು, ಶಿಲ್ಪಗಳನ್ನು ಅಭಿವೃದ್ಧಿಗೊಳಿಸುವುದು, ವಿದೇಶೀಯರನ್ನು ವಿಚಾರಿಸುವುದು, ಜನನಮರಣಗಳನ್ನು ಲೆಕ್ಕಮಾಡಿಸುವುದು, ವ್ಯಾಪಾರಗಳನ್ನು ವಿಮರ್ಶಿಸುವುದು, ಕೈಗಾರಿಕೆಗಳನ್ನು ವೃದ್ಧಿಗೊಳಿಸುವುದು, ರಸ್ತೆಗಳನ್ನು ಮಾಡಿ

ಸುವುದು, ಸೇತುವೆಗಳನ್ನು ಕಟ್ಟಿಸುವುದು, ಹಡಗುಗಳನ್ನು ಮಾಡಿಸುವುದು, ರಾಜಪುರುಷರನ್ನು ನಿಯೋಗಿಸುವುದು, ಚಾರದೃಷ್ಟಿಯಿಂದ ನೋಡುವುದು, ಕಳ್ಳತನ ಕೊಲೆಗಳನ್ನು ಖಂಡಿಸುವುದು, ತೆರಿಗೆಗಳನ್ನು ಬರಮಾಡಿಕೊಳ್ಳುವುದು, ಕಾಲುವೆ, ಕೆರೆ ಬಾವಿಗಳನ್ನು ತೋಡಿಸುವುದು, ನೀರನ್ನು ಬಿಡುವುದು, ನೆಲವನ್ನಳೆವುದು, ಬೆಳೆಯನ್ನು ಲೆಕ್ಕ ಮಾಡಿಸುವುದು, ದ್ಯೂತಮದ್ಯಾದಿ ವ್ಯಸನಗಳನ್ನು ವಿಮರ್ಶಿಸುವುದು, ಮೊದಲಾದ ಸರ್ವ ರಾಷ್ಟ್ರನಿರ್ವಾಹವಿಷಯಗಳಲ್ಲಿಯೂ ಸಹಸ್ರಾಕ್ಷನಂತೆ ಸಾವಿರಕಣ್ಣುಗಳ ನೋಟದಿಂದ ಜಾಗರೂಕನಾಗಿದ್ದು ಆತ್ಮರಕ್ಷಣೆಗಾಗಿ, ಆಹಾರ, ವಿಹಾರ, ಶಯ್ಯಾ, ಆಸನ, ಭಾಜನ, ಔಷಧ, ಬಂಧು, ಕಳತ್ರ ಮಿತ್ರಪುತ್ರಾದಿಗಳನ್ನೂ ನಂಬಲಾರದೆ ಪರಿಶೋಧಿಸುತ್ತ, ಇಪ್ಪತ್ತುನಾಲ್ಕುವರ್ಷ ರಾಜ್ಯವಾಳಿದನು.



## ಚಂದ್ರಗುಪ್ತನ ರಾಜ್ಯದ ವಿಸ್ತಾರವು.

ಕ್ರಿ. ಪೂ. ೩೨೨ ರ ಮೊದಲುಗೊಂಡು ೩೦೩ ರ ವರೆಗೆ ಎಂದರೆ, ಚಂದ್ರಗುಪ್ತನು ಮೊದಲು ಗ್ರೀಕರನ್ನು ಪಂಜಾಬುದೇಶದಿಂದ ಓಡಿಸಿದುದು ಮೊದಲುಗೊಂಡು, ಸೆಲ್ಯೂಕಸ್ ನಿಕೇಟರನನ್ನು ಓಡಿಸಿ, ಆತನೊಡನೆ ಸಂಧಿಮಾಡಿಕೊಳ್ಳುವ ವರೆಗೆ, ಚಂದ್ರಗುಪ್ತನು ಉತ್ತರದಲ್ಲಿ ಅಫಘಾನಿಸ್ಥಾನ, ಬಲೂಚಿಸ್ಥಾನಗಳವರೆಗೂ ಪೂರ್ವಪಶ್ಚಿಮದಲ್ಲಿ ಸಮುದ್ರದವರೆಗೂ ಇರುವ ರಾಜ್ಯವನ್ನು ಜಯಿಸಿ, ಏಕಚ್ಛತ್ರಾಧಿಪತ್ಯದಿಂದ ಆಳುತ್ತ ಹಿಂದೂ ದೇಶದ ಮೊದಲನೆಯ ಚಕ್ರವರ್ತಿಯೆಂಬ ಬಿರುದನ್ನು ಸಂಪಾದಿಸಿಕೊಂಡನು.

ಮೈಸೂರು ಗೆಜೆಟೀಯರಿನ ಲೇಖಕರಾದ ಮಿ. ರೈಸ್ ಸಾಹೇಬರ ಅಭಿಪ್ರಾಯದಂತೆ ಶಿಕಾರಿಪುರ ತಾಲೂಕು ಬಂದನಿಕ್ಕೆ ಗ್ರಾಮದ ಶಿಲಾಶಾಸನವು (ಕ್ರಿ. ಶ. ೧೨ ನೇ ಶತಾಬ್ದದಲ್ಲಿ) ಕುಂತಲದೇಶವೂ ಮೌರ್ಯರ ಅಧೀನದಲ್ಲಿದ್ದಂತೆ ವರ್ಣಿಸುತ್ತಿದೆ. ಇದು ಭೀಮಾ-ವೇದವತೀ ನದಿಗಳ ನಡುವೆ ಸಹ್ಯಾದ್ರಿಯವರೆಗೂ, ಶಿವಮೊಗ್ಗೆ, ಚಿತ್ರದುರ್ಗ, ಬಳ್ಳಾರಿ, ಧಾರವಾಡ, ಬಿಜಾಪುರ, ಬೊಂಬಾಯಿ, ಹೈದರಾಬಾದು ಸೀಮೆಗಳ ಭಾಗಗಳಿಗೂ ವ್ಯಾಪಿಸಿದ ದೇಶವೆಂದು ತೋರುವುದು. ಈ ದಕ್ಷಿಣದೇಶವನ್ನು ಜಯಿಸಿದವನು ಚಂದ್ರಗುಪ್ತನೋ, ಇಲ್ಲವೆ ಇವನ ಮಗನಾದ ಬಿಂದುಸಾರನೋ ತಿಳಿಯದು. ಮೈಸೂರು ಸೀಮೆಯಲ್ಲಿಯೇ ಶ್ರವಣಬೆಳಗೊಳದಲ್ಲಿಯ ಶಿಲಾಶಾಸನವನ್ನು ನೋಡಿದಲ್ಲಿ, ಚಂದ್ರಗುಪ್ತನು ಅಲ್ಲಿ ಜೈನಮತಾವ

ಲಂಬಿಯಾಗಿ ಮರಣಹೊಂದಿದಂತೆ ಕಂಡುಬರುವುದು. ಆದರೆ ಇದು ಇನ್ನೂ ಆಲೋಚಿಸತಕ್ಕುದಾಗಿದೆ.

ಹದಿನಾರು ವರುಷಗಳಲ್ಲಿ ಇಷ್ಟು ವಿಶಾಲವಾದ ರಾಜ್ಯವನ್ನು ನಿರ್ಮಿಸಿ ಅದನ್ನು ಬಹು ಜಾಗರೂಕತೆಯಿಂದ ಕಾಪಾಡಿದ ಈ ರಾಜನನ್ನು ಲೋಕದಲ್ಲಿ ಶೂರಾಗ್ರೇಸರರೆಂದು ಘನತೆಹೊಂದಿದ ಫಿಲಿಪ್, ಅಲೆಗ್ಜಾಂಡರ್, ಹೆನ್ನಿಬಾಲ್, ನೆಪೋಲಿಯನ್ ಮೊದಲಾದ ಮಹಾಸೇನಾನಾಯಕರಲ್ಲೊಬ್ಬನಾಗಿ ಎಣಿಸಬೇಕೆಂದು ಒಬ್ಬಾನೊಬ್ಬ ಪಾಶ್ಚಾತ್ಯ ಲೇಖಕನು ಬರೆದಿರುವನು.



# ಐದನೆಯ ಪ್ರಕರಣ.



## ಚಂದ್ರಗುಪ್ತನ ಕಾಲನಿರ್ಣಯವು.

ಹಿಂದೂದೇಶಕ್ಕೆ ಪ್ರಥಮಚಕ್ರವರ್ತಿಯಾದ ಚಂದ್ರಗುಪ್ತನಕಾಲವು ಹೇಗೆ ನಿರ್ಣಯಿಸಲ್ಪಟ್ಟಿತೆಂದು ಓದುವವರು ಕೇಳಬಹುದು. ಅವರ ಜಿಜ್ಞಾಸೆಯನ್ನು ತೃಪ್ತಿಪಡಿಸುವುದಕ್ಕಾಗಿ ಇಲ್ಲಿ ಈ ವಿಷಯವನ್ನು ಚರ್ಚಿಸಬೇಕಾಗಿದೆ. ಇದೂ ಅಲ್ಲದೆ; ಚಂದ್ರಗುಪ್ತ ಕಾಲನಿರ್ಣಯವು, ಹಿಂದೂದೇಶಚರಿತ್ರೆಯನ್ನು ಕಲಿಯ ಕೋರುವ ವಿದ್ಯಾರ್ಥಿಗಳು ಗಮನಿಸಬೇಕಾದ ಮುಖ್ಯ ವಿಷಯಗಳಲ್ಲೊಂದಾಗಿದೆ. ಹಿಂದೂದೇಶದ ಆದ್ಯಂತ ಚರಿತ್ರವು ಇಂದಿನವರೆಗೆ, ಹಿಂದೂಗಳ ಕಾಲವೆಂತಲೂ, ಮುಹಮ್ಮದೀಯರ ಕಾಲವೆಂತಲೂ, ಬ್ರಿಟಿಷರ ಪ್ರಭುತ್ವವೆಂತಲೂ ಮೂರು ಭಾಗವಾಗಿ ವರ್ಣಿತವಾಗಿದೆ. ಇವುಗಳಲ್ಲಿ ಎರಡನೆಯ, ಮೂರನೆಯ ಭಾಗಗಳಲ್ಲಿಯ ಕಾಲನಿರ್ಣಯಗಳು ನಿಶ್ಚಿತವಾಗಿವೆ. ಅವುಗಳನ್ನು ಕುರಿತು ವಿಶೇಷ ಭಿನ್ನಾಭಿಪ್ರಾಯಗಳಿಲ್ಲ. ಘಜನೀಮುಹಮ್ಮದನು ಸೋಮನಾಥ ದೇವಾಲಯವನ್ನು ದೋಚಿಕೊಂಡು ಹೋದ ಸಂವತ್ಸರವನ್ನೂ ಅಕ್ಬರು ಚಕ್ರವರ್ತಿಯು ರಾಜ್ಯಕ್ಕೆ ಬಂದ ವರ್ಷವನ್ನೂ ಲಾರ್ಡ್ ಕಾರ್ನ್‌ವಾಲ್ಲಿಸು ರಾಜಪ್ರತಿನಿಧಿಯಾಗಿ ಹಿಂದೂ ದೇಶಕ್ಕೆ ಬಂದ ವರ್ಷವನ್ನೂ ನಾವು ನಿಶ್ಚಯವಾಗಿ ಹೇಳಬಲ್ಲೆವು. ಆಯಾಕಾಲಗಳಲ್ಲಿ ಚರಿತ್ರಕಾರರು ಕಾಲಸ್ಥಲ ನಿರ್ಣಯಗಳೊಡನೆ ಸಮಕಾಲಿಕ ಚರಿತ್ರವಿಷಯಗಳನ್ನು ಬರೆದಿಟ್ಟಿರುವುದೇ ಇದಕ್ಕೆ ಕಾರಣವು. ಆದರೆ ಹಿಂದೂಗಳ ಕಾಲದ ಚರಿತ್ರಾಂಶಗಳ ಕಾಲನಿರ್ಣಯವು ಹೀಗಲ್ಲ. ಇದರೊಳಗಣ ಪ್ರತಿವಿಷಯದ ಕಾಲನಿರ್ಣಯವೂ ಸಂಶಯಾಸ್ಪದವೇ. ಪ್ರತಿವಿಷಯದಲ್ಲಿಯೂ ಅಭಿಪ್ರಾಯಭೇದಗಳು ತಂಡೋಪತಂಡಗಳಾಗಿರುವುವು. ಋಗ್ವೇದದಕಾಲ ನಾವುದೆಂಬುದಾಗಿ ನಿರ್ಣಯಿಸುವುದಾದರೆ ಒಬ್ಬನು ಐದುಸಾವಿರ ವರ್ಷಗಳ ಹಿಂದೆ ಎಂತಲೂ, ಮತ್ತೊಬ್ಬನು ಎಳುಸಾವಿರ ವರ್ಷಗಳ ಹಿಂದೆ ಎಂಬುದಾಗಿಯೂ ಇನ್ನೊಬ್ಬನು ಹತ್ತುಸಾವಿರ ವರ್ಷಗಳ ಹಿಂದೆ ಎಂತಲೂ ಉತ್ತರವನ್ನು ಕೊಡುವರು. ಇದು ಹೀಗೆಯೇ ಎಂದು ಹೇಳುವುದಕ್ಕೆ ತಕ್ಕ ಸಾಧನಗಳು ಇಲ್ಲ. ಹೀಗೆಯೇ ಉಪನಿಷತ್ತುಗಳ ಕಾಲವನ್ನು ಕುರಿತೂ, ಮಹಾಭಾಷ್ಯರಚನಾ ಕಾಲವನ್ನು ಕುರಿತೂ, ಶಂಕರಾಚಾರ್ಯರ ಅವತಾರಸಮಯನಿರ್ಣಯದಲ್ಲಿಯೂ, ವಾದಪ್ರತಿವಾದಗಳಿವೆ. ಮೇಲಣ ಕಾರಣಗಳಿಂದಲೇ ಹಿಂದೂಗಳ ಕಾಲವು ನಿಶ್ಚಿತಕಾಲಜ್ಞಾನಾಭಾವನೆಂಬ ಅಂಥ

ಕಾರದಿಂದ ತುಂಬಿಹೋಗಿದೆ. ಇಂತಹ ಮಹಾಂಧಕಾರ ಮಧ್ಯದಲ್ಲಿ ಚಂದ್ರಗುಪ್ತ ಕಾಲನಿರ್ಣಯವೆಂಬುದೊಂದು ಚಿಕ್ಕ ದೀಪವು ಗ್ರೀಕಚರಿತ್ರಕಾರರ ಸಹಾಯದಿಂದ ಬೆಳಗುತ್ತಿರುವುದರಿಂದ, ಅದನ್ನು ಆಧಾರವಾಗಿಟ್ಟುಕೊಂಡು ಅದರ ಮೊದಲೂ ಅನಂತರವೂ ಜರುಗಿದ ಚರಿತ್ರಾಂಶಗಳ ಕಾಲವನ್ನು ಪಂಡಿತರು ನಿಶ್ಚಯಿಸುತ್ತಿರುವರು.

ಆದುದರಿಂದ ಕಾಲನಿರ್ಣಯವೆಲ್ಲಕ್ಕೂ ಆಧಾರಭೂತವಾದ ಈ ಚಂದ್ರಗುಪ್ತ ಕಾಲವು ಹೇಗೆ ನಿರ್ಣೀತವಾಗಿದೆಯೋ ಅದು ಎಷ್ಟರ ಮಟ್ಟಿಗೆ ನಂಬತಕ್ಕದ್ದೋ ಎಂಬುದನ್ನು ನಾವು ಆಲೋಚಿಸಬೇಕಾಗಿದೆ.

ಅಲೆಗ್ಝಾಂಡರನು ಹಿಂದೂದೇಶಕ್ಕೆ ಬಂದಾಗ ಆತನೊಡನೆ ಬಂದ ಪಂಡಿತರೂ, ಚಂದ್ರಗುಪ್ತನ ಸಭೆಗೆ ರಾಯಭಾರಿಯಾಗಿ ಬಂದ ಮೆಗಾಸ್ತನೀಸ್ ಎಂಬವನೂ, ಅವನನ್ನನುಸರಿಸಿ, ಇನ್ನೂ ಅನೇಕ ಗ್ರೀಕ್-ಗ್ರಂಥಕಾರರೂ, ಸಾಂಡ್ರಕೋಟಸ್ ಇಲ್ಲವೆ ಶಾಂಡ್ರಗೋಪ್ಟಸ್ ಎಂಬವನು ಅಲೆಗ್ಝಾಂಡರನನ್ನು ಮೊದಲು ಬಂದು ನೋಡಿದಹಾಗೂ ಅಲೆಗ್ಝಾಂಡರನು ಮೃತಿಹೊಂದಿದ ಸ್ವಲ್ಪ ಕಾಲದಲ್ಲಿಯೇ ಆತನು ಪಂಜಾಬುದೇಶದಿಂದ ಗ್ರೀಕ್‌ಸೈನಿಕರನ್ನು ಓಡಿಸಿ ಸ್ವತಂತ್ರನಾದಹಾಗೂ, ಆತನ ರಾಜಧಾನಿಯು ಗಂಗಾತೀರದಲ್ಲಿಪಾಲಿಬೋತ್ರಾ ಎಂಬ ಹೆಸರಿಂದ ಹೆಚ್ಚಿನ ವೈಭವವನ್ನು ಹೊಂದಿದ ಪಟ್ಟಣವಾಗಿದ್ದಂತೆಯೂ, ಆತನಿಗೆ ಮೊದಲು ರಾಜನಾಗಿದ್ದುದು ನಂಡ್ರಸ್ ಎಂಬ ಹಾಗೂ, ಅವನಿಗೆ ಜನರಲ್ಲಿ ದ್ವೇಷವುಂಟಾದುದರಿಂದ ಸಾಂಡ್ರಕೋಟಸ್ ಎಂಬವನು ಅವನನ್ನು ಕೊಂದು ರಾಜನಾದಹಾಗೂ ಬರೆದಿರುವರು. ಮೊತ್ತಮೊದಲು ಸಾಂಡ್ರಕೋಟಸೆಂದರೆ ಯಾರೆಂದು ತಿಳಿಯದೆ ಹೋಯಿತಾದರೂ ಮೇಲಿನ ವರ್ಣನೆಗಳನ್ನೆಲ್ಲಾ ಚೆನ್ನಾಗಿ ವಿಮರ್ಶಿಸಿಪಾಶ್ಚಾತ್ಯ ವಿದ್ವಾಂಸರು ಸಾಂಡ್ರಕೋಟಸ್ ಎಂದರೆ ಚಂದ್ರಗುಪ್ತನೆಂದೂ, "ಪಾಲಿಹೋತ್ರ" ಎಂದರೆ ಪಾಟಲೀಪುತ್ರವೆಂತಲೂ, ನಂಡ್ರಸ್ ಎಂದರೆ ನಂದನೆಂತಲೂ ನಿಶ್ಚಯಿಸಿರುವರು. ಪಾಲಿಹೋತ್ರಕ್ಕೂ ಗಂಗಾನದಿಗೂ ಇರುವ ದೂರವನ್ನು ಮೆಗಾಸ್ತನೀಸು ಬರೆದಿರುವನು. ಅದು, ಈಗಿನ ಪಾಟ್ನಾ ಪಟ್ಟಣಕ್ಕೂ ಗಂಗೆಗೂ ಇರುವ ದೂರಕ್ಕೆ ಸರಿಹೋಗುತ್ತದೆ. ಇಷ್ಟೇ ಅಲ್ಲದೆ ಪಾಲಿಹೋತ್ರವು ಗಂಗಾ-ಶೋಣಾ ಸಂಗಮದಿಂದ ಉಂಟಾದ ಅಂತರ್ವೇದಿಯಲ್ಲಿರುವುದೆಂದು ಆತನು ಬರೆದ ವಿಷಯವು, ಈಗಿನ ಪಾಟ್ನಾ ಎಂದರೆ ಪೂರ್ವದ ಪಾಟಲೀಪುರಕ್ಕೇ ಅನ್ವಯಿಸುತ್ತದೆ. ಆದುದರಿಂದ "ಪಾಲಿಹೋತ್ರ" ಎಂದರೆ ಪಾಟಲೀಪುರವೆಂತಲೂ, ಸಾಂಡ್ರಕೋಟಸ್ ಎಂದರೆ ಚಂದ್ರಗುಪ್ತನೆಂತಲೂ, ಈತನೇ ಸೆಲ್ಯೂಕಸ್ ನಿಕೇಟರನ್ನು

ಓಡಿಸಿದನೆಂತಲೂ, ಈತನ ರಾಜಧಾನಿಯು ಪಾಟಲೀಪುರವೆಂತಲೂ, ನಾವು ದೃಢವಾಗಿ ಹೇಳಬಹುದು.

## ಕಾಲನಿರ್ಣಯಕ್ಕೆ ಎರಡನೆಯ ಸಾಧನವು.

ಹೀಗೆ ನಾವು ಒಂದು ನಿಶ್ಚಯವಾದ ಸಾಧನದ ಮೂಲಕ ಚಂದ್ರಗುಪ್ತನ ಕಾಲವನ್ನು ಕಂಡುಕೊಂಡೆವು. ಇದೇ ನಿಜವಾದುದೆಂದು ಒತ್ತಿ ಹೇಳುವುದಕ್ಕೆ ಮತ್ತೊಂದು ಸ್ವತಂತ್ರಸಾಧನವೂ ಇದೆ. ಮೊದಲನೆಯ ಸಾಧನಕ್ಕೂ ಇದಕ್ಕೂ ಸಂಬಂಧವಿಲ್ಲದೆ ಇದನ್ನು ಬೇರೆ ವಿಧವಾಗಿ ಲೆಕ್ಕ ಹಾಕಿ ಮೇಲಿನ ಕಾಲವನ್ನೇ ಸಾಧಿಸುವುದರಿಂದ ಇದನ್ನು ಸ್ವತಂತ್ರಸಾಧನವೆಂದು ಹೇಳಿದೆವು.

ಚಂದ್ರಗುಪ್ತನ ಮಗನು ಬಿಂದುಸಾರನು. ಬಿಂದುಸಾರನ ಮಗನು ಅಶೋಕವರ್ಧನನು. ಈತನೇ ಧರ್ಮೋಪದೇಶಕ್ಕಾಗಿ ತನ್ನರಾಜ್ಯದಲ್ಲೆಲ್ಲಿಯೂ ಶಿಲಾಶಾಸನಗಳನ್ನು ಕೆತ್ತಿಸಿ, ಹೆಚ್ಚಿನ ಖ್ಯಾತಿಯನ್ನು ಹೊಂದಿದ ಅಶೋಕನು. ಈತನ ಶಾಸನಗಳಲ್ಲಿ ಅಶೋಕನೆಂಬ ಹೆಸರಿಲ್ಲ. ಪ್ರಿಯದರ್ಶಿ ಎಂಬ ಸಂಸ್ಕೃತಪದಕ್ಕೆ ಪ್ರಾಕೃತರೂಪವಾದ ಪಿಯದಶಿ ಎಂಬ ಹೆಸರಿದೆ. ಆದರೆ ಅಶೋಕನಿಗೆ ಪ್ರಿಯದರ್ಶಿಯೆಂಬ ನಾಮಾಂತರವಿದೆಯೆಂದು ನಾವು ಅನೇಕ ಸಾಧನಗಳಿಂದ ನಿಶ್ಚಯಿಸಬಹುದು.* ಈ ವಿಷಯವು ಚರಿತ್ರಕಾರರೆಲ್ಲರೂ ನಿಸ್ಸಂದೇಹವಾಗಿ ಒಪ್ಪಿಕೊಂಡುದೇ. ಆದುದರಿಂದ ಇಲ್ಲಿ ಅದರ ವಿವರಣೆಯು ಅಗತ್ಯವಿಲ್ಲ.

ಅಶೋಕನಿಂದ ವಿರಚಿತವಾದ ಹದಿಮೂರನೆಯ ಶಿಲಾಶಾಸನದಲ್ಲಿ ಈ ಪ್ರಕಾರ ಬರೆದಿದೆ.

### ಹದಿಮೂರನೆಯ ಶಿಲಾಶಾಸನವು.

ಸತ್ಯವೇ ಜಯವು.

"ಪಿಯದಶಿಯು ಮುಖ್ಯವಾಗಿ ಹೇಳುವ ವಿಜಯವು ಧರ್ಮಸಂದೇಶದಿಂದ ಆಗುವ ವಿಜಯವೇ. ಇಂತಹ ವಿಜಯವನ್ನು ಪಿಯದಶಿಯು ತನ್ನ ಸಾಮ್ರಾಜ್ಯದಲ್ಲಿಯೇ ಅಲ್ಲದೆ ತನ್ನ ನೆರೆಹೊರೆಯ ಸೀಮೆಗಳಲ್ಲಿರುವ ಪ್ರಜೆಗಳ ಮೇಲೆಯೂ

*ಇದನ್ನು ಕುರಿತು ಹೆಚ್ಚಾಗಿ ತಿಳಿದುಕೊಳ್ಳಬೇಕಾದವರು "The Journal of the Royal Asiatic Society" ಯ ೧೯೦೧ನೇ ಸಂವತ್ಸರದ ಪುಟದಲ್ಲಿ "Identity of Piyadasi with Asoka Maurya" ಎಂಬ ಲೇಖನವನ್ನು ನೋಡಬೇಕು.

ಹೊಂದಿರುವನು. ಆರುನೂರು ಯೋಜನ ದೂರದಲ್ಲಿರುವ ಅಂಟಿಯೋಕನೆಂಬ ಹೆಸರುಳ್ಳ ರಾಜನು ನಿವಾಸಿಸುವ ಪ್ರದೇಶಕ್ಕೂ, ಈ ಅಂಟಿಯೋಕನಿಗಾಚೆ 'ತುರಮಾಯೆ' 'ಅಂತಿಕಿನಿ' 'ಮಕ' 'ಅಲಿಕಸುಂದರ' ಎಂಬ ಹೆಸರಿನಿಂದ ಶೋಭಿಸುವ ರಾಜಚತುಷ್ಟಯವು ನಿವಾಸಿಸುವ ಪ್ರದೇಶಗಳಿಗೂ ಈ ವಿಜಯವು ವ್ಯಾಪಿಸಿದೆ.''*

ಈ ಶಾಸನದಲ್ಲಿ ಐವರು ವಿದೇಶೀಯ ರಾಜರುಗಳ ಹೆಸರುಗಳನ್ನು ಉದಾಹರಿಸಿರುತ್ತಾರೆ. ಇವರಲ್ಲಿ ಅಂತಿಯೋಕನೆಂಬವನು ಅಂಟಿಯೋಕಸ್ ಥಿಯೊಸ್ ಎಂಬ ಸಿರಿಯ ದೇಶದ ಅರಸನು. ಇವನು ಕ್ರಿ. ಪೂ. ೨೪೬ ರ ವರೆಗೆ ರಾಜ್ಯವನ್ನಾಳಿದನು. ತುರುಮಾಯೇ ಎಂಬವನು ಟಾಲಿಮಿ ಫಿಲಾಡೆಲ್ಫಸ್ ಎಂಬ ಹೆಸರಿನಿಂದ ಈಜಿಪ್ತು ದೇಶದಲ್ಲಿ ರಾಜ್ಯಭಾರಮಾಡಿ ಕ್ರಿ. ಪೂ. ೨೪೬ ರಲ್ಲಿ ಮೃತನಾದನು. ಈತನ ಮಗಳನ್ನೇ ಅಂಟಿಯೋಕನು ವಿವಾಹವಾದನು. ಅಂತಕಿನಿ ಎಂಬವನು ಅಂಟಿಗೋನಸ್ ಗೊನಿಟಸ್ ಎಂಬ ಹೆಸರಿನಿಂದ ಮೆಕಡೋನಿಯ ರಾಜ್ಯವನ್ನು ಸಂಪಾದಿಸಿ ಕ್ರಿ. ಪೂ. ೨೩೯ ರ ವರೆಗೆ ಆಳಿದನು. ಅಲಿಕಸುಂದರನೆಂಬವನು ಪೈರಸ್ ಎಂಬವನ ಮಗನು. ಅಲೆಗ್ಜಾಂಡರೆಂಬವನು ಎಪಿರಸ್ ದೇಶದ ಪ್ರಭುವು. ಕ್ರಿ. ಪೂ. ಸುಮಾರು ೨೬೦ ರ ವರೆಗೆ ಪ್ರಭುತ್ವವನ್ನು ಮಾಡಿದನು. ಮಾಗಾಸ್ ಎಂಬವನು ಸೈರಿಸ್ ದೇಶದ ಅರಸನು. ಟಾಲಿಮಿಗೆ ಸಾಪತ್ನ್ಯಸೋದರನು. ಕ್ರಿ. ಪೂ. ೨೫೮ ರಲ್ಲಿ ಇವನು ಪರಲೋಕಗತನಾದನು.

ಮೇಲೆ ಉದಾಹರಿಸಿದ ಅರಸರು ಅಲ್ಲಲ್ಲಿ ಭಿನ್ನಕಾಲಗಳಲ್ಲಿದ್ದರೂ, ಮೇಲಣ ಐದುಹೆಸರುಗಳುಳ್ಳ ರಾಜರುಗಳು ಏಕಕಾಲದಲ್ಲಿ ಭಿನ್ನದೇಶಗಳಲ್ಲಿ ಆಳುತ್ತಿರುವುದು ನಾವು ಉದಾಹರಿಸಿದ ಸಿರಿಯಾ, ಈಜಿಪ್ತು, ಮೆಕಡೋನಿಯಾ, ಎಪಿರಸ್, ಸೈರೆನಸ್ ರಾಜರ ವಿಷಯವಾಗಿಯೇ ಸಿದ್ಧಿಸುತ್ತಿದೆ. ಆದುದರಿಂದ ಕಾಲನಿರ್ಣಯವಿಷಯದಲ್ಲಿ ಎಷ್ಟು ಮಾತ್ರಕ್ಕೂ ವ್ಯತ್ಯಾಸವಿರಲು ಕಾರಣವಿಲ್ಲ. ಇದೂ ಅಲ್ಲದೆ ಈ ಮಾಗಾಸ್ ಬಿಟ್ಟು, ಇದೇ ಹೆಸರಿನ ಮತ್ತೊಬ್ಬ ರಾಜನು ಇಲ್ಲವೇ ಇಲ್ಲ.

ಮಾಗಾಸು ಕ್ರಿ. ಪೂ. ೨೫೮ ರಲ್ಲಿ ಮೃತನಾದನು. ಅಲೆಗ್ಜಾಂಡರನು ಕೂಡ ಆ ಸಂವತ್ಸರದಲ್ಲಿಯೇ ಅಥವಾ ಅದಕ್ಕೆ ಸ್ವಲ್ಪಮೊದಲೇ ಪರಲೋಕಗತನಾದನು.

---

*ಏಷೇಚಾ ಮುಖಮುತೇ ವಿಜಯೇ ದೇವಾನಾಂ ಪ್ರಿಯ ಸಯೋಧ್ರಮ ವಿಜಯೋ ಸೋಚ ಪುನಲಧೋ ದೇವಾನಾಂ ಪ್ರಿಯ ಸ ಇಹ ಚ ಸದ್ರೇಷು ಚ ಅಂತೇಷು [೮] ಅಷಷುಪಿಯೋಜನಾ ಶ[ತೇ]ಷು ಯಾತ್ರ ಅಂತಿಯೋಕೋನಾಮ ಯೋನ ರಾಜಾ ವರಾಂಚ ತೇವ ಆಂತಿ ಯೋಕೇನ ಚತುರೇ [೪]ರಾಜಾನಿ ತುರಮಾಯೇ ನಾಮ ಅಂತಿಕಿನಿ ನಾಮ ಮಕ ನಾಮ ಅಲಿಕ ಸುಂದರೋ ನಾಮ.

ಆದುದರಿಂದ ಮೇಲೆ ಹೇಳಿದ ಅಶೋಕಶಾಸನವು ಮಾಗಾಸು ಬದುಕಿರುವಾಗಲೇ ಅಥವಾ ಮೃತಿಹೊಂದಿದ ಸಮಾಚಾರವು ತಿಳಿಯುವ ಮೊದಲೇ ಕೆತ್ತಿಸಲ್ಪಟ್ಟಿರ ಬೇಕು. ಸೈರಸ್‌ನಿಂದ ಮಾಗಾಸು ಮೃತಿಹೊಂದಿದ ವರ್ತಮಾನವು ಹಿಂದೂ ದೇಶಕ್ಕೆ ಬರುವುದಕ್ಕೆ ಒಂದು ವರ್ಷಕ್ಕಿಂತ ಹೆಚ್ಚಿನ ಕಾಲವು ಬೇಕಾಗದೆಂಬುದು ನಿಶ್ಚಯವು. ಆದುದರಿಂದ ಕ್ರಿ. ಪೂ. ೨೫೭ ಕ್ಕೆ ತರುವಾಯ ಈ ಶಾಸನವು ಕೆತ್ತಿ ಸಲ್ಪಟ್ಟಿದಲ್ಲವೆಂದು ನಾವು ನಿಶ್ಚಯಿಸಬಹುದು. ಈ ಶಾಸನವು ಅಶೋಕನ ಪಟ್ಟಾಭಿಷೇಕವಾದ ತರುವಾಯ ಹದಿಮೂರನೆಯ ವರ್ಷದಲ್ಲಿ ಕೆತ್ತಿಸಲ್ಪಟ್ಟಿತು; ಎಂದರೆ, ಪಟ್ಟಾಭಿಷೇಕವಾಗಿ ಹನ್ನೆರಡು ವರ್ಷಗಳು ಆಗಿಹೋದುವೆಂದು ಅರ್ಥವು ೨೫೭ ಕ್ಕೆ ೧೨ ಸೇರಿದರೆ ೨೬೯ ರ ಸಂಖ್ಯೆ ಬರುವುದು. ಆದುದರಿಂದ ಕ್ರಿ. ಪೂ. ೨೬೯ ನೆಯ ವರ್ಷದಲ್ಲಿ ಅಶೋಕಮಹಾರಾಜನು ಪಟ್ಟಾಭಿಷಿಕ್ತನಾದನೆಂದು ಗೊತ್ತಾಗುತ್ತದೆ. ಸಿಂಹಳದ್ವೀಪ ಚರಿತ್ರೆಯನ್ನು ನೋಡಲಾಗಿ, ಕೆಲವು ಗೃಹಚ್ಛಿದ್ರಗಳಿಂದ ಅಶೋಕನು ರಾಜ್ಯಕ್ಕೆ ಬಂದ ತರುವಾಯ ಮೂರು ಸಂವತ್ಸರಗಳನಂತರ ಆತನಿಗೆ ಪಟ್ಟಾಭಿಷೇಕವಾಯಿತೆಂದು ತಿಳಿಯಬರುತ್ತಿದೆ. ಆದುದರಿಂದ ಆತನಿಗೆ ಕ್ರಿ. ಪೂ. ೨೬೯ರಲ್ಲಿ ಪಟ್ಟಾಭಿಷೇಕವಾದರೂ ಆತನು ಅದಕ್ಕೆ ಮೂರು ವರ್ಷ ಮೊದಲೇ, ಎಂದರೆ ಕ್ರಿ. ಪೂ. ೨೭೨ ರಲ್ಲಿ ರಾಜ್ಯಕ್ಕೆ ಬಂದಂತೆ ಗ್ರಹಿಸಬಹುದು.

ಅಶೋಕನ ತಂದೆಯು ಬಿಂದುಸಾರನು. ಆತನು ಇಪ್ಪತ್ತೈದು ವರ್ಷ ರಾಜ್ಯವಾಳಿದನೆಂದು ಪುರಾಣಗಳು ಹೇಳುತ್ತಿವೆ. ನಮ್ಮ ಚರಿತ್ರನಾಯಕನಾದ ಚಂದ್ರಗುಪ್ತನು ಬಿಂದುಸಾರನ ತಂದೆಯು. ಈತನು ಇಪ್ಪತ್ತುನಾಲ್ಕು ವರುಷಗಳು ರಾಜ್ಯವಾಳಿದನೆಂದು ಪುರಾಣಗಳೂ, ಸಿಂಹಳದ ಗ್ರಂಥಗಳೂ ಹೇಳುತ್ತಿವೆ. ಎಂದರೆ, ಚಂದ್ರಗುಪ್ತನೂ ಬಿಂದುಸಾರನೂ ಕೂಡಿ ೪೯ ವರ್ಷಗಳ ಕಾಲ ರಾಜ್ಯವಾಳಿದಂತಾಯಿತು. ಈ ಸಂಖ್ಯೆ ಮತ್ತು ಇದುವರೆಗೆ ನಾವು ಸಾಧಿಸಿದ ೨೭೨, ಎಂದರೆ ಅಶೋಕನು ರಾಜ್ಯಕ್ಕೆ ಬಂದ ಸಂಖ್ಯೆ, ಇವೆರಡನ್ನೂ ಸೇರಿಸಿದರೆ ೩೨೧ ಬರುತ್ತದೆ. ಇದೇ ಚಂದ್ರಗುಪ್ತನು ರಾಜ್ಯಕ್ಕೆ ಬಂದ ಸಂವತ್ಸರದಸಂಖ್ಯೆಯಾಗಿದೆ.

ಈ ರೀತಿ ನಾವು ಎರಡು ಭಿನ್ನಮಾರ್ಗಗಳಿಂದ ಹೊರಟು, ಬೇರೆ ಬೇರೆ ದಾರಿಯಿಂದ ಹೋದರೂ ಘಟ್ಟಕುಟೀಪ್ರಭಾತ ನ್ಯಾಯದಿಂದ ಒಂದೇ ಸ್ಥಳಕ್ಕೆ ಬಂದು ಸೇರುತ್ತಲಿದ್ದೇವೆ. ಸಾಂಡ್ರಕೋಟಸ್ ಎಂದರೆ ಚಂದ್ರಗುಪ್ತನೆಂದೆಣಿಸಿ ಅಲೆಗ್ಝಾಂಡರನ ದಂಡಯಾತ್ರಾತಿಥಿಗಳನ್ನೂ, ಗ್ರೀಕ ಚರಿತ್ರಕಾರರನ್ನೂ ಆಧಾರವಾಗಿ ತೆಗೆದುಕೊಂಡು ಮಾಡಿದ ಲೆಕ್ಕದಿಂದಲೂ ಅಶೋಕವರ್ಧನನ ಶಾಸನವನ್ನು ಆಧಾರವಾಗಿಟ್ಟುಕೊಂಡು ಪುರಾಣಾದಿಗಳಲ್ಲಿ ವರ್ಣಿಸಿದ ಮೌರ್ಯರಾಜರ ಪಾಲ

ನೆಯ ಕಾಲವನ್ನು ಲೆಕ್ಕ ಹಾಕಿದರೂ, ಕ್ರಿ. ಪೂ. ೩೨೧ ರಲ್ಲಿಯೋ, ೩೨೨ ರಲ್ಲಿಯೋ ಆತನು ರಾಜ್ಯಕ್ಕೆ ಬಂದಂತೆ ಸ್ಪಷ್ಟವಾಗುತ್ತಿದೆ.

ಇದಲ್ಲದೆ ಬೇರೊಂದು ವಿಶೇಷವಿದೆ. ಅಶೋಕನು ಕ್ರಿ. ಪೂ. ೨೭೨ ರ ಮೊದಲುಗೊಂಡು ೨೩೧ ರ ವರೆಗೆ ರಾಜ್ಯವಾಳಿದನು. ಆತನಿಂದ ಶಾಸನಗಳಲ್ಲಿ ಹೇಳಲ್ಪಟ್ಟ ಅಂಟಿಯೋಕನು ಅವನಿಗೆ ಸಮಕಾಲಿಕನಾಗಿ ೨೬೧ ರಿಂದ ೨೪೬ ರ ವರೆಗೆ ರಾಜ್ಯವಾಳಿದನು. ಚಂದ್ರಗುಪ್ತನು ಅಶೋಕನ ಅಜ್ಜನು. ಸೆಲ್ಯೂಕಸ್ ನಿಕೇಟರು ಅಂಟಿಯೋಕನ ಅಜ್ಜನು. ಮೊಮ್ಮಕ್ಕಳು ಸಮಕಾಲಿಕರಾಗಿದ್ದಲ್ಲಿ ಅವರ ಅಜ್ಜಂದಿರೂ ಸಮಕಾಲಿಕರಾಗುವುದು ಸಹಜವೆಂದು ಸಾಧಾರಣವಾಗಿ ಗ್ರಹಿಸಬಹುದು. ಆದುದರಿಂದ ಸೆಲ್ಯೂಕಸ್ ನಿಕೇಟರು ಚಂದ್ರಗುಪ್ತನಿಗೆ ಸಮಕಾಲಿಕನೆಂಬುದು ಸ್ಪಷ್ಟವು.

ಮೇಲೆ ಬರೆದ ಕಾರಣಗಳಿಂದ ನಮ್ಮ ಚರಿತ್ರನಾಯಕನಾದ ಚಂದ್ರಗುಪ್ತ ಮೌರ್ಯನು ಅಲೆಗ್ಝಾಂಡರನೊಡನೆಯೂ, ಸೆಲ್ಯೂಕಸ್ ನಿಕೇಟರನೊಡನೆಯೂ, ಸಮಕಾಲಿಕನೆಂದು ತೇಲುತ್ತದೆ. ಗ್ರೀಕರಾದ ಇವರಿಬ್ಬರ ಚರಿತ್ರೆಗಳೂ ಸಮಕಾಲಿಕರಾದ ಗ್ರಂಥಕಾರರಿಂದಲೇ ಬರೆಯಲ್ಪಟ್ಟಿರುವುದರಿಂದ ಅವರ ಕಾಲದ ವಿಷಯದಲ್ಲಿ ಸಂಶಯವಿಲ್ಲ. ಅವರ ಯುದ್ಧಗಳನ್ನು ಕುರಿತೂ, ಅಭಿಯೋಗಗಳನ್ನು ಕುರಿತೂ, ಪ್ರವಾಸಗಳನ್ನು ಕುರಿತೂ, ಮಾಡಲ್ಪಟ್ಟ ಕಾಲನಿರ್ಣಯಗಳಲ್ಲಿ ಒಂದೆರಡು ತಿಂಗಳ ಹೆಚ್ಚು ಕಡಿಮೆ ಬಂದರೂ ಬರಬಹುದೇ ಹೊರತು ಅದಕ್ಕಿಂತ ಹೆಚ್ಚಿನ ವ್ಯತ್ಯಾಸವು ಬಾರದು.

ಅಲೆಗ್ಝಾಂಡರನು ಹಿಂದೂದೇಶಕ್ಕೆ ಬಂದಾಗ ಚಂದ್ರಗುಪ್ತನು ಆತನನ್ನು ಸಂದರ್ಶಿಸಿದಂತಿರುವುದರಿಂದ ಈ ಪ್ರಸಂಗವು ಕ್ರಿ. ಪೂ. ೩೨೫ ರಲ್ಲಿ ಅಥವಾ ೩೨೬ ರಲ್ಲಿ ನಡೆದಿರಬೇಕು. ಅಲೆಗ್ಝಾಂಡರು ಕ್ರಿ. ಪೂ. ೩೨೫ ನೆಯ ಸಂವತ್ಸರದ ಮೇ ತಿಂಗಳಲ್ಲಿಯೋ ಜೂನ್ ತಿಂಗಳಲ್ಲಿಯೋ ಕೀರ್ತಿಶೇಷನಾದನು. ಆತನ ಮರಣವಾರ್ತೆಯು ತಿಳಿದ ಸ್ವಲ್ಪಕಾಲದೊಳಗಾಗಿ ಚಂದ್ರಗುಪ್ತನು ಸ್ವತಂತ್ರನಾದನೆಂದು ತೋರುತ್ತದೆ. ಅಲೆಗ್ಝಾಂಡರನ ಮರಣವಾರ್ತೆಯು ಹಿಂದೂದೇಶದ ಜನರಿಗೆ ತಿಳಿಯುವುದಕ್ಕೆ ಎರಡುತಿಂಗಳಾಯಿತೆಂದು ಲೆಕ್ಕ ಹಿಡಿದರೂ, ಅಗಸ್ಟು ಅಥವಾ ಸೆಪ್ಟೆಂಬರ್ ತಿಂಗಳಲ್ಲಿ ಆ ಸಮಾಚಾರವು ತಿಳಿದಿರಬಹುದು. ಆಗ ಚಂದ್ರಗುಪ್ತನು ಕೂಡಲೇ ಸೈನ್ಯವನ್ನು ತೆಗೆದುಕೊಂಡು ಹೋಗಿ ಪಂಜಾಬುದೇಶದಿಂದ ಗ್ರೀಕರನ್ನು ಓಡಿಸಿಬಿಟ್ಟುದರಿಂದ ಈ ಸಂಗತಿಯು ಕ್ರಿ. ಪೂ. ೩೨೩ ರಲ್ಲಿ ಜರುಗಿ

ತೆಂದು ಹೇಳಬಹುದು. ಸೆಲ್ಯೂಕಸು ತನ್ನ ಆಸಿಯಾಖಂಡದ ವೈಭವಕ್ಕೆ ಅಸ್ತಿಭಾರವನ್ನು ಹಾಕುತ್ತಿರುವಾಗ, ಚಂದ್ರಗುಪ್ತನು ಹಿಂದೂದೇಶಕ್ಕೆ ಚಕ್ರವರ್ತಿಯಾದನೆಂದು ಜಸ್ಟಿನ್ನನು ಬರೆದಿರುವನು.* ಸೆಲ್ಯೂಕಸು ಕ್ರಿ.ಪೂ. ೩೨೧ ರಲ್ಲಿ ಬೆಬಿಲೋನ್ ಪಟ್ಟಣಕ್ಕೆ ಕ್ಷೇತ್ರಪನಾಗಿ ನಿಯಮಿಸಲ್ಪಟ್ಟನು. ಈ ಕ್ಷೇತ್ರಪಾಧಿಕಾರವೇ ತರುವಾಯ ಆತನು ರಾಜನಾಗುವುದಕ್ಕೆ ಮೂಲಾಧಾರವು. ಅಂದಿಗೆ ಚಂದ್ರಗುಪ್ತನು ಮಗಧಾಧೀಶ್ವರನಾಗಿ ಇದ್ದಿರಬೇಕು. ಅದುದರಿಂದ ನಂದಸಂಹಾರ, ಪರ್ವತೇಶ್ವರ ವಧೆ, ಅಮಾತ್ಯ ರಾಕ್ಷಸನನ್ನು ವಶಮಾಡಿಕೊಳ್ಳುವುದೇ ಮೊದಲಾದ ಮುದ್ರಾರಾಕ್ಷಸವರ್ಣಿತವಾದ ಕಥಾಂಶವೆಲ್ಲವೂ ೩೨೧ರಲ್ಲಿಯೋ ತರುವಾಯ ಒಂದೆರಡು ವರ್ಷಗಳಲ್ಲಿಯೋ ನಡೆದಿರಬೇಕು. ಸೆಲ್ಯೂಕಸು ೩೦೫ ರಲ್ಲಿಯೋ ೩೦೪ ರಲ್ಲಿಯೋ ಚಂದ್ರಗುಪ್ತನ ಮೇಲೆ ದಂಡೆತ್ತಿಬಂದು ೩೦೩ ರಲ್ಲಿ ಪೂರ್ತಿಯಾಗಿ ಪರಾಭವವನ್ನು ಹೊಂದಿ, ಮಗದಾಧಿಪತಿಯೊಡನೆ ಸಂಧಿ ಮಾಡಿಕೊಂಡು ಹೊರಟುಹೋದನು. ಚಂದ್ರಗುಪ್ತನು ಇಪ್ಪತ್ತನಾಲ್ಕು ವರ್ಷಗಳವರೆಗೆ ರಾಜ್ಯವಾಳಿದನೆಂಬುದಾಗಿ ವಾಯು, ಭಾಗವತ ಮೊದಲಾದ ಪುರಾಣಗಳಲ್ಲಿಯೂ ಸಿಂಹಳದೇಶದ ಚರಿತ್ರೆಯಲ್ಲಿಯೂ ಬರೆದಿರುವುದರಿಂದ ಆತನು ೨೯೮ ರಲ್ಲಿಯೋ ೨೯೭ರಲ್ಲಿಯೋ ಕೀರ್ತಿಶೇಷನಾದನೆಂಡು ನಾವು ಹೇಳಬಹುದು. ಚಂದ್ರಗುಪ್ತನು ಅಲೆಗ್ಝಾಂಡರನನ್ನು ನೋಡುವ ಕಾಲಕ್ಕೆ ಇಪ್ಪತ್ತೈದು ವರ್ಷ ಪ್ರಾಯದವನೆಂದು ಎಣಿಸಿದಲ್ಲಿ ಆತನು ೩೫೦ ರಲ್ಲಿ ಜನ್ಮವೆತ್ತಿರಬೇಕು. ನಾವು ಹೀಗೆ ತಿಳಿದುಕೊಂಡ ಕಾಲನಿರ್ಣಯವೆಲ್ಲವೂ ಈ ಕೆಳಗಣ ಪಟ್ಟಿಯಲ್ಲಿ ತೋರಿಸಲ್ಪಟ್ಟದೆ.

| ಕ್ರಿ. ಪೂ. | |
|---|---|
| ೩೫೦ | ಚಂದ್ರಗುಪ್ತ ಜನನ. |
| ೩೨೬, ೩೨೫ | ಅಲೆಗ್ಝಾಂಡರನನ್ನು ನೋಡುವುದು. |
| ೩೨೩ ಅಕ್ಟೋಬರು, ೩೨೨ | ಚಂದ್ರಗುಪ್ತನು ಗ್ರೀಕರನ್ನು ಪಂಜಾಬಿನಿಂದ ಓಡಿಸುವುದು. |
| ೩೨೨, ೩೨೧ | ಮಗಧರಾಜ್ಯವನ್ನು ಆಕ್ರಮಿಸುವುದು. |
| ೩೦೫, ೩೦೪ | ಸೆಲ್ಯೂಕಸು ಹಿಂದೂದೇಶಡ ಮೇಲೆ ದಂಡೆತ್ತಿಬರುವುದು. |
| ೩೦೩ | ಸೆಲ್ಯೂಕಸನ ಪರಾಭವ, ಚಂದ್ರಗುಪ್ತನೊಡನೆ ಸಂಧಿ. |
| ೨೯೮, ೨೯೭ | ಚಂದ್ರಗುಪ್ತನ ಮರಣ. |

* Sandrakottus having thus won the throne, was reigning over India, when Seleucus was laying the foundations of his future greatness. (Justin)

# ಆರನೆಯ ಪ್ರಕರಣವು.

## ಚಂದ್ರಗುಪ್ತನ ರಾಜಧಾನಿ.

ಭರತಖಂಡವೆಲ್ಲವನ್ನೂ ಏಕಚ್ಛತ್ರಾಧಿಪತ್ಯದ ಕೆಳಗೆ ತಂದ ನಮ್ಮ ಕಥಾನಾಯಕನು ಪಾಟಲಿಪುತ್ರವೆಂಬ ನಗರದಲ್ಲಿ ರಾಜ್ಯಭಾರಮಾಡುತ್ತಿದ್ದನು. ಪುಷ್ಪಪುರ, ಕುಸುಮಪುರ ಎಂಬ ಬೇರೆಬೇರೆ ಹೆಸರುಗಳುಳ್ಳ ಈ ಮಹಾಪಟ್ಟಣವು ಚಂದ್ರಗುಪ್ತ ಚಕ್ರವರ್ತಿಯ ಪ್ರಭುತ್ವಕಾಲದಲ್ಲಿ ಮಹೋನ್ನತಾವಸ್ಥೆಯನ್ನು ಹೊಂದಿ, ಆತನ ಮೊಮ್ಮಗನಾದ ಅಶೋಕನ ರಾಜ್ಯಕಾಲದಲ್ಲಿ ಅತ್ಯುಚ್ಚವೈಭವಶಿಖರವನ್ನೇರಿ, ಭೂಲೋಕದಲ್ಲಿ ಆ ಕಾಲದಲ್ಲಿದ್ದ ಯಾವತ್ತು ಪಟ್ಟಣಗಳಲ್ಲಿ ಅತಿಶ್ರೇಷ್ಠವಾದುದೆಂತಲೂ, ಅದ್ವಿತೀಯವಾದುದೆಂತಲೂ ಹೆಸರುಗೊಂಡಿದ್ದಿತು. ಇದೂ ಅಲ್ಲದೆ, ಅನೇಕ ಕವಿಗಳಿಗೂ, ಪಂಡಿತರಿಗೂ, ಶಿಲ್ಪಿಗಳಿಗೂ, ಅನ್ಯದೇಶವರ್ತಕರಿಗೂ, ಆಶ್ರಯಸ್ಥಾನವೂ, ವರ್ಣನೀಯ ವಿಷಯವೂ ಆಗಿ ರಾಘವರ ಅಯೋಧ್ಯೆಗೂ, ಕೌರವರ ಹಸ್ತಿನಾವತಿಗೂ, ಮೊಗಲರ ಢಿಲ್ಲೀನಗರಕ್ಕೂ, ಆಂಗ್ಲೇಯರ ಕಲಕತ್ತಾ ನಗರಕ್ಕೂ, ಸರಿಹೋಲಿಸತಕ್ಕ ಈ ಪುಷ್ಪಪುರವು, ಸುಮಾರು ಸಾವಿರ ವರ್ಷಗಳವರೆಗೆ ಮಗಧರಾಜಧಾನಿಯಾಗಿದ್ದು ಶೋಭಿಸಿತು. ಇಂತಹ ಪುರಶ್ರೇಷ್ಠದ ಉತ್ಪತ್ತಿಯನ್ನೂ, ಚಂದ್ರಗುಪ್ತನ ಕಾಲದಲ್ಲಿ ಅದರ ವೈಭವವನ್ನೂ ಸಂಕ್ಷೇಪವಾಗಿ ತದನಂತರದ ಚರಿತ್ರೆಯನ್ನೂ, ಈ ಪ್ರಕರಣದಲ್ಲಿ ವರ್ಣಿಸುವುದು ಅತ್ಯಂತ ಆವಶ್ಯಕವಾಗಿದೆ.

## ನಾಮನಿರ್ದೇಶವು.

ಸಾಧಾರಣವಾಗಿ ಇತ್ತಲಾಗಿನ ಇಂಗ್ಲೀಷು ಚರಿತ್ರಗ್ರಂಥಗಳಲ್ಲಿ "ಪಾಟಲಿಪುತ್ರ" ಎಂಬ ಹೆಸರೇ ಹೆಚ್ಚಾಗಿ ವ್ಯವಹರಿಸಲ್ಪಟ್ಟಿದ್ದರೂ, ಸಂಸ್ಕೃತ ಕವಿಗಳು ಮಾತ್ರ ಪಾಟಲಿಪುರ, ಕುಸುಮಪುರ, ಪುಷ್ಪಪುರ ಎಂಬ ಹೆಸರುಗಳನ್ನೇ ವಾಡಿಕೆಯಾಗಿ ಉಪಯೋಗಿಸಿರುವರು.* ತ್ರಿಕಾಂಡಶೇಷದಲ್ಲಿ ಮಾತ್ರ ಪಾಟಲಿಪುತ್ರವೆಂಬ ಪಾಠಾಂತರವಿದೆ. ಬೃಹತ್ಕಥೆಯಲ್ಲಿ ಕೂಡ ಈ ಹೆಸರು ಬಂದಂತಿದೆ. ಗ್ರೀಕರ ಭಾಷೆಯಲ್ಲಿ ಇದನ್ನು ಪಾಲಿಬೋತು ಎಂದು ಉಪಯೋಗಿಸಿರುವರು. ಈ ಪಟ್ಟಣಸ್ಥಾನದಲ್ಲಿದ್ದ ಪಟ್ಟಣಕ್ಕೆ ಈಗ ಪಾಟ್ನಾ ಎಂಬ ಹೆಸರು ಸಲ್ಲುತ್ತಿದೆ.

---

*ರಘುವಂಶ ೬ ನೆಯ ಸರ್ಗ, ೨೪ ನೇ ಶ್ಲೋಕ—ಆರ್ಯಭಟ್ಟೀಯ, ದ್ವಿತೀಯಗಣಿತಪಾದವು.

## ಈಗ ಈ ಪಟ್ಟಣವೆಲ್ಲಿದೆ?

ಹಿಂದೂದೇಶದ ಭೂಪಟವನ್ನು ಇದಿರಿಗಿಟ್ಟುಕೊಂಡು ನೋಡಿದರೆ, ಈಶಾನ್ಯ ದಿಕ್ಕಿನಲ್ಲಿ ಈಗ ಈ ದೇಶಕ್ಕೆಲ್ಲ ಮುಖ್ಯ ರಾಜಧಾನಿಯಾಗಿದ್ದ ಕಲ್ಕತ್ತಾ ನಗರ ವನ್ನು ಕಾಣಬಹುದು. ಈ ಪುರವು ಗಂಗಾನದಿಯ ಶಾಖೆಗಳಲ್ಲಿ ದೊಡ್ಡದಾದ ಹೂಗ್ಲೀ ನದಿಯ ತೀರದಲ್ಲಿ ಗಂಗಾಸಾಗರ ಸಂಗಮಕ್ಕೆ ನಲವತ್ತು ಮೈಲುಗಳ ದೂರದಲ್ಲಿ ಶೋಭಿಸುತ್ತಿರುವುದು. ಇಲ್ಲಿಂದ ಹಡಗುದಾರಿಯಾಗಿ, ಇಲ್ಲವೆ ಹೊಗೆಬಂಡಿಯ ಮಾರ್ಗವಾಗಿ ಹೋದರೆ ಸುಮಾರು ೩೩೩ ಮೈಲುಗಳ ದೂರದಲ್ಲಿ ಪಾಟ್ನಾ ಪಟ್ಟಣವು ಗಂಗಾತೀರದಲ್ಲಿ ಕಲಕತ್ತೆಗೆ ವಾಯವ್ಯದಿಕ್ಕಿನಲ್ಲಿರುವುದನ್ನು ನೋಡಬಹುದು. ಇದು ಕೆಳಬಂಗಾಳದ ಪಟ್ಟಣಗಳಲ್ಲಿ ಕಲಿಕತ್ತೆಗೆ ಎರಡನೆಯ ದಾಗಿದೆ. ಇಷ್ಟು ವಿಸ್ತೀರ್ಣವೂ, ಜನಸಂಖ್ಯೆಯೂ ಇಂದಿಗೂ ಉಳ್ಳ ಈ ಪಾಟ್ನಾ ನಗರವು ಮಹಮ್ಮದೀಯರ ಪಾಲನೆಯಲ್ಲಿ ಬಿಹಾರು ಜಿಲ್ಲೆಗೆ ಮುಖ್ಯಸ್ಥಾನವಾ ಗಿದ್ದಿತು. ಆದರೆ ಈ ಹೆಸರಿಂದೊಪ್ಪುವ ಪುರವು ೬೫೦ ವರ್ಷಗಳಿಗೆ ಮೊದಲು ಇರಲಿಲ್ಲ. ಇದರ ಸ್ಥಾನದಲ್ಲಿ ಸ್ವಲ್ಪಕಾಲದ ಹಿಂದೆ ಬಯಲು ಸ್ಥಳವೂ, ಅದಕ್ಕೂ ಮೊದಲು ಎಂದರೆ ಪ್ರಾಚೀನ ಕಾಲದಲ್ಲಿ ಮತ್ತೊಂದು ದೊಡ್ಡ ಪುರವೂ ಇದ್ದಿತು. ಅದೇ ಪಾಟಲೀಪುರವು.

ರಾಜಕೀಯ ವಿಷಯದಲ್ಲಿ ಗಂಗಾನದಿಯ ಒಂದು ವಿಶೇಷವನ್ನು ನೋಡಿರಿ. ಗಂಗಾಶಾಖೆಯಾದ ಹೂಗ್ಲೀನದಿಯ ತೀರದಲ್ಲಿ ಸ್ವಲ್ಪಕಾಲದ ಹಿಂದಿನವರೆಗೂ ಆಂಗ್ಲೇಯರ ರಾಜಧಾನಿಯಾಗಿದ್ದ ಕಲಕತ್ತೆ ಇದೆ. ಗಂಗೆಗೆ ಉಪನದಿಯಾದ ಯಮುನಾತೀರದಲ್ಲಿ ಮಹಮ್ಮದೀಯರ ರಾಜಧಾನಿಗಳಾಗಿದ್ದ ಢಿಲ್ಲೀ ಮತ್ತು ಆಗ್ರಾ ನಗರಗಳಿರುವುವು. ಢಿಲ್ಲಿಗೆ ಮೂರು ಮೈಲುಗಳ ದೂರದಲ್ಲಿ ಪಾಂಡವರ ರಾಜಧಾನಿಯಾದ ಇಂದ್ರಪ್ರಸ್ಥವಿದ್ದಿತು. ಇಂದ್ರಪ್ರಸ್ಥಕ್ಕೆ ಅರವತ್ತುಮೈಲು ದೂರವಾಗಿ ವಾಯವ್ಯದಿಕ್ಕಿನಲ್ಲಿ ಕೌರವಪಾರಿಕ್ಷಿತರ ರಾಜಧಾನಿಯಾದ ಹಸ್ತಿನಾ ವತಿಯು ಇದ್ದಿತು. ಗಂಗೆಗೆ ಉತ್ತರದ ಉಪನದಿಯಾದ ಸರಯು (ಗೋಗ್ರಾ) ವಿನ ದಕ್ಷಿಣತೀರದಲ್ಲಿ ಅಯೋಧ್ಯೆಯು ರಘುಕುಲದ ರಾಜರುಗಳಿಗೆ ರಾಜಧಾನಿ ಯಾಗಿದ್ದಿತು. ಗಂಗೆ, ಗೋಗ್ರಾ, ರಾಪ್ತಿ, ಗಂಡಕೀ, ಶೋಣಾನದಿಗಳು ಕಲೆವ ಪ್ರಾಂತದಲ್ಲಿ ಪಾಟಲೀಪುತ್ರವು ಚಂದ್ರಗುಪ್ತನಿಗೆ ರಾಜಧಾನಿಯಾಗಿದ್ದಿತು. ಆದು ದರಿಂದ ರಾಘವ, ಕೌರವ, ಪಾಂಡವ, ಪಾರಿಕ್ಷಿತ, ನಂದ, ಚಂದ್ರಗುಪ್ತ, ಗುಪ್ತ, ಆಂಧ್ರ, ಮಹಮ್ಮದೀಯ, ಆಂಗ್ಲ ರಾಜಧಾನಿಗಳು, ಗಂಗೆಯನ್ನೋ ಗಂಗೆಯ ಶಾಖೋಪಶಾಖೆಗಳನ್ನೋ ಆಶ್ರಯಿಸಿ ಇರುವುವು. ಇವುಗಳಲ್ಲಿ ಪಾಟಲೀಪುರವು

ನಿರ್ಮಿಸಲ್ಪಟ್ಟ ಸ್ಥಳವು, ಕಂಠಮಾಲೆಗೆ ಪೋಣಿಸಿದ ಪದಕದಂತೆ ಅನೇಕ ನದಿಗಳ ಸಂಗಮಕ್ಕೆ ಸಮೀಪದಲ್ಲಿರುವುದರಿಂದ ಅಲಂಕಾರವಾಗಿಯೂ, ಬಲಪ್ರದವಾಗಿಯೂ ವ್ಯಾಪಾರಕ್ಕೆ ಅನುಕೂಲವಾದುದರಿಂದ ಧನಪ್ರದವಾಗಿಯೂ ಇದ್ದಿತು. ಆದುದರಿಂದಲೇ ಇದು ಸಾವಿರಕ್ಕಿಂತಲೂ ಹೆಚ್ಚು ವರ್ಷಗಳಕಾಲ ಹಿಂದುಸ್ಥಾನಕ್ಕೆ ಪ್ರಬಲವಾದ ರಾಜಧಾನಿಯಾಗಿ ಶೋಭಿಸುತ್ತಿದ್ದಿತು.



## ನಾಮೋತ್ಪತ್ತಿ.

ಪಾಟಲೀಪುತ್ರವೆಂಬ ಹೆಸರುಂಟಾಗುವುದಕ್ಕೆ ಅನೇಕರು ಅನೇಕ ಹೇತುಗಳನ್ನು ಹೇಳುತ್ತಿರುವರು. ಪಾಟಲಿ ಎಂದರೆ ಒಂದು ಪುಷ್ಪವಿಶೇಷವು. ಇದನ್ನು ಕನ್ನಡದಲ್ಲಿ ಪಾದರಿಯ ಹೂವೆನ್ನುವರು. ಆ ಪುರದ ಆಕಾರವು ಈ ಹೂವನ್ನು ಹೋಲಿದ್ದಿತೆಂತಲೂ, ಆದುದರಿಂದಲೇ ಆ ಹೆಸರು ಬಂದಿತೆಂತಲೂ ಕೆಲವರ ಅಭಿಪ್ರಾಯವು. ಆ ಪಟ್ಟಣದಲ್ಲಿಯೂ, ಸುತ್ತುಮುತ್ತಲೂ, ಪಾಟಲೀ ವೃಕ್ಷಗಳೂ ಪುಷ್ಪಗಳೂ ಹೆಚ್ಚಾಗಿದ್ದುದರಿಂದ ಈ ಹೆಸರುಂಟಾಯಿತೆಂದು ಕೆಲವರ ಅಭಿಪ್ರಾಯವು. ಶ್ರೀರಾಮಲಕ್ಷ್ಮಣರು ಸರಯೂ-ಗಂಗಾ ಸಂಗಮದಮೇಲೆ ಸರಯೂ ನದಿಯನ್ನು ದಾಟಿ, ದಕ್ಷಿಣತೀರವನ್ನು ಸೇರುತ್ತಲೇ ಅವರಿಗೆ ಪಾಟಲಾದಿ ವೃಕ್ಷ ಸಂಕೀರ್ಣವಾದ ವನವು ಕಾಣಬಂದಂತೆ ಶ್ರೀಮದ್ರಾಮಾಯಣದಲ್ಲಿ ವರ್ಣಿತವಾಗಿದೆ. * ಆದುದರಿಂದ ಬಹು ಪ್ರಾಚೀನಕಾಲದಿಂದಲೂ ಮಗಧದೇಶದ ಈ ಭಾಗವು ಪಾಟಲಿಪುಷ್ಪಕ್ಕಾಗಿಯೇ ಪ್ರಸಿದ್ಧಿ ಹೊಂದಿದಂತೆ ಕಂಡುಬರುವುದು.

ಈಗ ಪಾಟ್ನಾನಗರದಲ್ಲಿ ಚಿಕ್ಕಪಟ್ನದೇವಿ, ದೊಡ್ಡಪಟ್ನದೇವಿ, ಎಂಬೆರಡು ದೇವಾಲಯಗಳಿವೆ. ಅವುಗಳಲ್ಲಿ ಅರ್ಚಕರಾಗಿರುವವರು ಹೀಗೆ ಹೇಳುವರು. ಸುದರ್ಶನನೆಂಬ ರಾಜನಿಗೆ ಪಾಟಲಿ ಎಂಬ ಮಗಳಿದ್ದಳು. ಆಕೆಯು ಈ ಪಟ್ಟಣವನ್ನು ಕಟ್ಟಿಸಿದಳು. ರಾಜನು ಆಕೆಗೆ ಈ ಪಟ್ಟಣವನ್ನು ಬಹುಮತಿಯಾಗಿ ಕೊಡಲು, ಅವಳು ಇದನ್ನು ಪುತ್ರವಾತ್ಸಲ್ಯದಿಂದ ತಾಯಿಯಂತೆ ರಕ್ಷಿಸುತ್ತಿದ್ದುದರಿಂದ ಪಾಟಲಿಪುತ್ರವೆಂಬ ಹೆಸರು ಇದಕ್ಕೆ ಬಂದಿತಂತೆ.

ಪುತ್ರಕನೆಂಬ ರಾಜಕುಮಾರನು ಮಂತ್ರದಂಡಮಹಿಮೆಯಿಂದ ನಿರ್ಮಿಸಿದನೆಂತಲೂ, ಆತನ ಹೆಂಡತಿಯ ಹೆಸರು ಪಾಟಲಿ ಎಂತಲೂ ಆಕಾರಣದಿಂದಲೇ ಇದಕ್ಕೆ ಪಾಟಲಿಪುತ್ರವೆಂಬ ಹೆಸರಿಟ್ಟನೆಂತಲೂ ಕಥಾಸರಿತ್ಸಾಗರದಲ್ಲಿಯೂ, ಹ್ಯೂಯೆಟ್ಸಾಂಗನ ಯಾತ್ರಾಚರಿತ್ರೆಯಲ್ಲಿಯೂ ಬರೆಯಲ್ಪಟ್ಟಿದೆ. ಡಿಯೋಡೋರಸ್ ಎಂಬ

---

*ವಾಲ್ಮೀಕಿರಾಮಾಯಣ, ಬಾಲಕಾಂಡ, ೨೪ ನೆಯ ಸರ್ಗ.

ಗ್ರೀಕ ಚರಿತ್ರಕಾರನು ಹೆರಕ್ಲಿಸ್ ಎಂದರೆ ಬಲರಾಮನಿಂದ ಇದು ಪ್ರತಿಷ್ಠಿತವಾದ ಹಾಗೆ ತಾನು ಕೇಳಿದಂತೆ ತಿಳಿಸಿರುವನು. ವಾಯುಪುರಾಣವೂ, ಸುತ್ತಪಿಟಕವೂ, ಶಿಶುನಾಗವಂಶಸ್ಥನಾದ ಉದೇಯನು ಇದನ್ನು ಕಟ್ಟಿಸಿದಂತೆ ತಿಳಿಸುತ್ತವೆ.

ಮೇಜರ್ ವಿಲ್ಫೋರ್ಡರು, ಪಾಟಲಿಪುತ್ರವು ಪದ್ಮಾವತಿಯೆಂತಲೂ, ಮಹಾ ಬಲಿಪುರವೆಂತಲೂ ಪ್ರಖ್ಯಾತವಾಗಿದ್ದಂತೆಯೂ ಈ ಹೆಸರುಗಳು ಬರುವುದಕ್ಕೆ, ಮಹಾಬಲಿಯೆಂದೂ ಮಹಾಪದ್ಮನೆಂದೂ ಅದನ್ನು ಪ್ರತಿಷ್ಠಿಸಿದ ರಾಜನ ಹೆಸರುಗಳಾಗಿದ್ದುದೇ ಕಾರಣವೆಂತಲೂ ವಿವರಿಸುತ್ತಿರುವರು. ಹಾಗೆ ನಂದನ ಪಟ್ಟಣವಾದುದರಿಂದ ಬಲಿಪುತ್ರವೆಂದೂ, ಪಾಲಿಬೋತ್ರವೆಂದೂ ಹೆಸರನ್ನು ಹೊಂದಿ, ಗ್ರೀಕರ ಕಿವಿಗೆ ಮುಟ್ಟಿತೆಂದೂ ಹೇಳುತ್ತಿರುವನು. ಇನ್ನೊಂದು ವ್ಯುತ್ಪತ್ತಿಯಿದೆ. ಕೋಸಿ ಗಂಗಾಸಂಗಮದಲ್ಲಿ ರಾಜಮಹಾಲು ಎಂಬಲ್ಲಿಗೆ ಸಮೀಪದಲ್ಲಿ ಪಾಲಿಬೋತ್ರವು ಇದ್ದಿತಂತೆ, ಈಗಲೂ ಮತ್ಸ್ಯದೇಶದಲ್ಲಿ ಪಾಲಿಜಾತಿಯವರು ಅನೇಕರು ವಾಸವಾಗಿರುವರು. ಆದುದರಿಂದ ಪಾಲಿಬೋತ್ರವೆಂಬ ಹೆಸರು ಬಂದಿತೆಂತಲೂ ಹೇಳುತ್ತಾರೆ. ಸೂರ್ಯವಂಶದರಾಜನಾದ ಮನುನೆಂಬವನಿಗೆ ೧೮ನೆಯ ತಲೆಯವನು ಸುದರ್ಶನರಾಜನೆಂತಲೂ, ಆತನ ಮಗಳು ಪಾಟಲಿ ಎಂತಲೂ ಈಕೆಯ ಮೂಲಕವಾಗಿಯೇ ಪಾಟಲಿಪುತ್ರನೆಂಬ ಹೆಸರು ಬಂದಿತೆಂತಲೂ ಇನ್ನೊಂದು ವ್ಯಾಖ್ಯಾನವು ಕಂಡುಬರುತ್ತಿದೆ.



## ಮತ್ತೊಂದು ಚಿತ್ರಕಥೆ.

ದಕ್ಷಿಣದೇಶದಲ್ಲೊಬ್ಬ ಬ್ರಾಹಣನಿದ್ದನು. ಆತನಿಗೆ ಮೂರುಮಂದಿ ಮಕ್ಕಳಿದ್ದರು. ಆ ಬ್ರಾಹ್ಮಣನು ಚಿಕ್ಕವರಾದ ತನ್ನ ಮಕ್ಕಳನ್ನು ಮನೆಯ ಹತ್ತಿರವೇ ಇರಿಸಿ ಹಿಮಾಲಯದಲ್ಲಿಯ ಗಂಗಾದ್ವಾರಕ್ಕೆ ಯಾತ್ರೆ ಹೊರಟು ಅಲ್ಲಿಯೇ ಕಾಲಧರ್ಮವನ್ನು ಹೊಂದಿದನು. ಎಷ್ಟುಕಾಲವಾದರೂ ತಂದೆಯು ತಿರುಗಿ ಬಾರದುದರಿಂದ ಆತನ ಮಕ್ಕಳು ಮೂವರೂ ವಿದ್ಯಾಭ್ಯಾಸ ನಿಮಿತ್ತವಾಗಿ ಹೊರಟು, ಕುಮಾರಸ್ವಾಮಿ ಕ್ಷೇತ್ರದ ಹತ್ತಿರವಿದ್ದ ಚಿಂಚಣಿ ಎಂಬ ಗ್ರಾಮದಲ್ಲಿ ವಾಸವಾಗಿದ್ದ ಭೋಜಕನೆಂಬ ಬ್ರಾಹ್ಮಣ ವಿದ್ವಾಂಸನನ್ನು ಆಶ್ರಯಿಸಿದರು. ಆ ಬ್ರಾಹ್ಮಣನು ಈ ಮೂವರಿಗೂ ತಕ್ಕಂತೆ ವಿದ್ಯೆಯನ್ನು ಹೇಳಿ ತನ್ನ ಮೂವರು ಹೆಣ್ಣುಮಕ್ಕಳನ್ನು ಈ ಮೂವರಿಗೂ ಕೊಟ್ಟು ವಿವಾಹಮಾಡಿ ಅವರನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡನು.

ಅವರು ಅನೇಕಕಾಲ ಅಲ್ಲಿಯೇ ಇದ್ದು, ಒಂದು ಸಾರಿ ಕ್ಷಾಮವು ಬರಲು, ತಮ್ಮ ಹೆಂಡಿರನ್ನು ಅಲ್ಲಿಯೇ ಬಿಟ್ಟು ಧನಾರ್ಜನೆಗಾಗಿ ತಾವು ದೇಶಾಂತರಕ್ಕೆ ಹೊರಟುಹೋದರು. ಅವರು ಹೊರಡುವಾಗ ನಡುವಣವನ ಹೆಂಡತಿಯು ಗರ್ಭಿಣಿಯಾಗಿದ್ದಳು. ಆದರೆ ಆ ಸಮಾಚಾರವು ಆ ಬ್ರಾಹ್ಮಣನಿಗೆ ತಿಳಿಯದು. ಆಕೆಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಪುತ್ರಕನೆಂದು ಹೆಸರಿಟ್ಟರು. ಆದರೆ ಬ್ರಾಹ್ಮಣರು ತಿರಿಗಿ ಬಾರದುದರಿಂದಲೂ, ಬರವು ಹೆಚ್ಚಾದುದರಿಂದಲೂ, ಪುತ್ರಕನನ್ನು ಕರೆದುಕೊಂಡು ಆತನ ತಾಯಿಯು ಮಗಧ ದೇಶಕ್ಕೆ ಹೋಗಬೇಕಾಯಿತು. ಅಲ್ಲಿ ಈಕೆಯು ತನ್ನ ಕುಮಾರನೊಡನೆ ಯಜ್ಞದತ್ತನೆಂಬ ಬ್ರಾಹ್ಮಣನನ್ನು ಆಶ್ರಯಿಸಿ ಇದ್ದಳು.

ಪುತ್ರಕನು ದೊಡ್ಡವನಾಗಿ ವಿದ್ಯಾಬುದ್ಧಿಗಳನ್ನು ಕಲಿತು ತುಂಬ ಧನವನ್ನು ಸಂಪಾದಿಸಿದನು. ತನ್ನ ತಂದೆ, ಚಿಕ್ಕತಂದೆ, ದೊಡ್ಡತಂದೆ ಮೊದಲಾದವರು ದೇಶಾಂತರಕ್ಕೆ ಹೋಗಿ ಇನ್ನೂ ಬರಲಿಲ್ಲವೆಂಬ ಸಮಾಚಾರವನ್ನು ಕೇಳಿ ಅವರನ್ನು ಕಂಡುಕೊಳ್ಳುವ ನಿಮಿತ್ತ ಒಂದು ಅನ್ನಸತ್ರವನ್ನು ಸ್ಥಾಪಿಸಿ, ತಾನು ಸತ್ರಾಧಿಕಾರಿಯಾಗಿದ್ದು ಬಂದುಹೋಗುವವರ ಗೋತ್ರ ಮತ್ತು ಹೆಸರುಗಳನ್ನು ವಿಚಾರಿಸಿಕೊಳ್ಳುತ್ತಿದ್ದನು. ಆ ಮೂವರು ಬ್ರಾಹ್ಮಣರೂ ಒಂದು ದಿನ ಆ ಸತ್ರಕ್ಕೆ ಬರುವ ಸಂದರ್ಭವುಂಟಾಯಿತು. ಅವರು ಆ ಪುತ್ರಕನ ಸಮಾಚಾರವೆಲ್ಲವನ್ನೂ ತಿಳಿದು, ಅವನು ವ್ಯಭಿಚಾರಜಾತನೆಂದು ತಿಳಿದು ಅವನನ್ನು ಕೊಲ್ಲುವುದಕ್ಕೆ ಕೆಲವರನ್ನು ನಿಯಮಿಸಿದರು. ಪುತ್ರಕನು ಅವರಿಗೆ ಲಂಚವಿತ್ತು ಅವರ ಕೈಯಿಂದ ತಪ್ಪಿಸಿಕೊಂಡು ವಿಂಧ್ಯಪ್ರಾಂತಕ್ಕೆ ಹೋದನು. ಈತನು ಅಲ್ಲಿ ಸಂಚರಿಸುತ್ತ ಇರಲು, ರಾಕ್ಷಸರಾದ ಇಬ್ಬರು ಅಣ್ಣತಮ್ಮಂದಿರು ತಮ್ಮ ಪಿತ್ರಾರ್ಜಿತವಾದ ಮೂರು ವಸ್ತುಗಳನ್ನು ಕುರಿತು ವಿವಾದಮಾಡುತ್ತಿದ್ದುದನ್ನು ಕಂಡನು. ಭೋಜನಪಾತ್ರೆ, ದಂಡ ಮತ್ತು ಪಾದರಕ್ಷೆಗಳು ಎಂಬ ಇವೇ ಆ ವಸ್ತುಗಳು. ಈ ಮೂರರಲ್ಲಿಯೂ ಮೂರು ವಿಶೇಷಗಳಿದ್ದುವು. ಭೋಜನಪಾತ್ರೆಯು ಕೋರಿದ ಭೋಜನಪದಾರ್ಥಗಳನ್ನು ಕೊಡುವುದು. ದಂಡದಿಂದ ಕೋರಿದ ದ್ರವ್ಯವು ಸಿಕ್ಕುವುದು. ಪಾದರಕ್ಷೆಗಳನ್ನು ತೊಟ್ಟರೆ ಆಕಾಶಪಥದಲ್ಲಿ ಸ್ವೇಚ್ಛಾವಿಹಾರವನ್ನು ಮಾಡಬಹುದು. ಇಂತಹ ವಸ್ತುಗಳಿಗಾಗಿ ಹೋರಾಡುತ್ತಿದ್ದವರು ಪುತ್ರಕನನ್ನು ಮಧ್ಯವರ್ತಿಯಾಗಿಟ್ಟುಕೊಂಡರು. ರಾಕ್ಷಸಪುತ್ರರು ಓಡಬೇಕೆಂತಲೂ, ಯಾರು ನಿರ್ಣೀತಸ್ಥಲವನ್ನು ಮೊದಲು ಸೇರುವನೋ ಅವನಿಗೇ ಈ ಮೂರು ವಸ್ತುಗಳೂ ಸೇರತಕ್ಕುವೆಂತಲೂ ಪುತ್ರಕನು ನಿರ್ಣಯಿಸಿದನು. ಅವರು ಅದಕ್ಕೆ ಒಪ್ಪಿ ಓಡತೊಡಗಿದರು. ಅತ್ತ ಹಾಗೆ ಅವರನ್ನು ಓಡಬಿಟ್ಟು, ಇತ್ತ ಪುತ್ರಕನು ಪಾದರಕ್ಷೆ

ಗಳನ್ನು ಧರಿಸಿ ಉಳಿದ ಎರಡು ವಸ್ತುಗಳನ್ನು ತೆಗೆದುಕೊಂಡು ಹಾರಿ, ಆಕಾಶ ಮಾರ್ಗವಾಗಿ ಆಕರ್ಷಿಕಾಪುರಕ್ಕೆ ಹೋದನು. ಅಲ್ಲಿಯ ಅರಸು ಮಹೇಂದ್ರ ವರ್ಮನು. ಆತನಿಗೆ ಪಾಟಲಿ ಎಂಬ ಮಗಳಿದ್ದಳು. ಆಕೆಯು ಯುಕ್ತವಯಸ್ಕ ಳಾಗಿ ವಿವಾಹಕ್ಕೆ ಸಿದ್ಧಳಾಗಿರುವಳೆಂಬುದನ್ನು ಕೇಳಿ ಪುತ್ರಕನು ಒಂದು ದಿನ ಆಕಾಶಮಾರ್ಗವಾಗಿ ಆಕೆಯ ಮಂದಿರವನ್ನು ಸೇರಿದನು. ಆಕೆಯೂ ಈತನ ಅಮಾನುಷ ಶಕ್ತಿಗೆ ಆಶ್ಚರ್ಯಗೊಂಡು ಆತನನ್ನು ವರಿಸಿದಳು. ಆದರೆ ಆ ಸಮಾಚಾರವು ಅರಸನಿಗೆ ತಿಳಿದಲ್ಲಿ ಆತನು ಪುತ್ರಕನನ್ನು ಕೊಲ್ಲುವನೆಂದು ಯೋಚಿಸಿ ಅವರಿಬ್ಬರೂ ಅಲ್ಲಿಂದ ಆಕಾಶಮಾರ್ಗವಾಗಿ ಹೊರಟು, ಒಂದು ಪಟ್ಟ ಣವನ್ನು ನಿರ್ಮಿಸಿ, ತಮ್ಮಿಬ್ಬರ ಹೆಸರನ್ನೂ ಕೂಡಿಸಿ ಅದಕ್ಕೆ "ಪಾಟಲೀ ಪುತ್ರ" ವೆಂಬ ಹೆಸರನ್ನಿಟ್ಟರಂತೆ. ಈ ಕಥೆಯು ಬೃಹತ್ಕಥೆಯೆಂಬ ಗ್ರಂಥದಲ್ಲಿದೆ.

ಹೀಗೆ ಈ ಗ್ರಾಮದ ಉತ್ಪತ್ತಿಯನ್ನು ಕುರಿತು ಅನೇಕ ಕಥೆಗಳಿವೆ. ಇನ್ನು ಇವನ್ನು ಬಿಟ್ಟು ಚರಿತ್ರಭಾಗಕ್ಕೆ ಬರೋಣ.



## ಪಾಟಲೀ ದುರ್ಗವು.

ಕ್ರಿ. ಪೂ. ೪೯೦ ರಲ್ಲಿ ಅಜಾತಶತ್ರುವೆಂಬವನು ಮಗಧಕ್ಕೆ ರಾಜನಾದನು. ಇದಕ್ಕೆ ಮೊದಲು ಪಾಟಲಿಯೆಂಬುದು ಗಂಗೆಗೆ ದಕ್ಷಿಣತೀರದಲ್ಲಿದ್ದ ಒಂದು ಚಿಕ್ಕ ಹಳ್ಳಿಯು. ಆ ನದಿಯ ಉತ್ತರಭಾಗದಲ್ಲಿ ಲಿಚ್ಛವಿ ವಂಶದ ರಾಜರ ಪ್ರಬಲವಾದ ರಾಜ್ಯವಿದ್ದಿತು. ಆ ರಾಜರು ತನ್ನ ರಾಜ್ಯಕ್ಕೇನೂ ತೊಂದರೆ ಮಾಡದಂತೆ ಅವ ರನ್ನು ಒತ್ತಿಡಬೇಕೆಂದು ಅಜಾತಶತ್ರುವು ಪಾಟಲೀ ಗ್ರಾಮದಲ್ಲಿ ಒಂದು ದುರ್ಗ ವನ್ನು ಕಟ್ಟಿಸಿದನು. ರಾಜಭೃತ್ಯರು ದುರ್ಗವನ್ನು ನಿರ್ಮಿಸುತ್ತಿದ್ದ ಕಾಲದಲ್ಲಿ ಗೌತಮ ಬುದ್ಧನು ಅಲ್ಲಿಗೆ ಬಂದನು. ಆತನು ಆ ದುರ್ಗವನ್ನು ನೋಡಿ ಅದರ ವಿಷಯವಾಗಿ ಈ ರೀತಿ ಭವಿಷ್ಯವನ್ನು ಹೇಳಿದನಂತೆ:—ಹೆಚ್ಚಿನ ಖ್ಯಾತಿಯನ್ನು ಹೊಂದುವ ಸ್ಥಳಗಳಲ್ಲಿಯೂ, ನಾಲ್ಕು ದಿಕ್ಕುಗಳಿಂದಲೂ ವರ್ತಕರನ್ನೂ ವ್ಯಾಪಾ ರವನ್ನೂ ಆಕರ್ಷಿಸುವುದರಿಂದ ಹೆಸರುಗೊಳ್ಳುವ ಪಟ್ಟಣಗಳಲ್ಲಿಯೂ ಇದು ಮುಖ್ಯವಾದುದು. ಆದರೆ ಈ ಪಟ್ಟಣಕ್ಕೆ ಅಗ್ನಿ, ಜಲ, ಅಂತಃಕಲಹ ಎಂಬ ಮೂರು ವಿಪತ್ತುಗಳುಂಟಾಗುವುವು.

ಉದಯನನು ಅಜಾತಶತ್ರುವಿನ ಮೊಮ್ಮಗನು. ಈತನು ಕ್ರಿ. ಪೂ. ೪೫೦ ರಲ್ಲಿ ರಾಜನಾದನು. ಈತನು ಪಾಟಲೀದುರ್ಗದ ಹತ್ತಿರವೇ ಕ್ರಿ. ಪೂ. ೪೩೪ ರಲ್ಲಿ

ಪಾಟಲೀಪುತ್ರ ಪಟ್ಟಣವನ್ನು ಕಟ್ಟಿಸಿದನು. ಇದೇ ಭಗವಾನ್ ಬುದ್ಧದೇವನ ಭವಿಷ್ಯತ್ತನ್ನನುಸರಿಸಿ, ಸಾವಿರ ವರ್ಷಗಳವರೆಗೂ ಹಿಂದೂದೇಶದ ಒಂದು ಕಂಠರತ್ನದಂತೆ ಶೋಭಿಸಿತು.

ಇದಕ್ಕೆ ಮೊದಲು ಮಗಧರಾಜ್ಯಕ್ಕೆ ರಾಜಗೃಹವು ರಾಜಧಾನಿಯಾಗಿದ್ದಿತು. ಉದಯುನನು ರಾಜಧಾನಿಯನ್ನು ಪಾಟಲೀಪುತ್ರಕ್ಕೆ ಮಾರ್ಪಡಿಸಿದನು. ಹೀಗೆ ಪರ್ವತಪ್ರಾಂತಗಳಲ್ಲಿದ್ದ ರಾಜಗೃಹದಿಂದ ನದಿಯ ದಡದಲ್ಲಿದ್ದ ಪಾಟಲೀಪುತ್ರಕ್ಕೆ ರಾಜಧಾನಿಯನ್ನು ಬದಲಾಯಿಸುವುದಕ್ಕೆ ಕಾರಣವಿಲ್ಲದೆ ಇರಲಿಲ್ಲ. ಮಗಧ ರಾಜ್ಯವು ದಿನಕ್ರಮವಾಗಿ ಅಭಿವೃದ್ಧಿಯನ್ನು ಹೊಂದುತಿದ್ದಿತು. ರಾಜ್ಯದ ಸಮಸ್ತ ಭಾಗಗಳನ್ನೂ ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೂ, ಹಿಂದೂದೇಶದಲ್ಲಿನ ವ್ಯಾಪಾರವೆಲ್ಲವನ್ನೂ ಆಕರ್ಷಿಸುವುದಕ್ಕೂ. ಗಂಗಾ, ಶೋಣಾ, ಗೋಗ್ರಾ ಮೊದಲಾದ ನದಿಗಳ ಸಂಗಮದ ಸಮೀಪವಿದ್ದ ಪಾಟಲಿಪುತ್ರವು ಬಹು ಯೋಗ್ಯವಾಗಿರುವುದೆಂದು ನಿಶ್ಚಿತವಾಗಿದ್ದಿತು. ಉದಯುನನು ಶಿಶುನಾಗ ವಂಶದ ಅರಸನು. ಕ್ರಿ. ಪೂ. ೩೭೧ ರಲ್ಲಿ ಈ ವಂಶವು ಅಂತ್ಯವಾಗಿ ಮಗಧವು ನಂದರಿಗೆ ಅಧೀನವಾಯಿತು. ಅವರನ್ನು ಓಡಿಸಿ ನಮ್ಮ ಕಥಾನಾಯಕನಾದ ಚಂದ್ರಗುಪ್ತನು ಕ್ರಿ.ಪೂ.೩೨೧ ರಲ್ಲಿ ಮಗಧಾದಿಪತಿಯಾದನೆಂದು ಇದಕ್ಕೆ ಮೊದಲೇ ಬರೆದಿರುವೆವು.



## ಚಂದ್ರಗುಪ್ತನಕಾಲದ ಪಾಟಲೀಪುತ್ರವು.

ಕ್ರಿ. ಪೂ. ೩೦೩ ರಲ್ಲಿ ಚಂದ್ರಗುಪ್ತನು ಸೆಲ್ಯುಕಸೆಂಬ ಗ್ರೀಕರಾಜನನ್ನೋಡಿಸಿ ಆತನೊಡನೆ ಸಂಧಿಯನ್ನು ಮಾಡಿಕೊಂಡನೆಂದು ಮೊದಲೇ ಬರೆದಿರುವೆವು. ಆ ಗ್ರಿಕರಾಜನು ಮೆಗಾಸ್ತನೀಸೆಂಬುವನನ್ನು ಪಾಟಲೀಪುತ್ರದಲ್ಲಿ ಚಂದ್ರಗುಪ್ತನ ಹತ್ತಿರ ರಾಯಭಾರಿಯಾಗಿಟ್ಟನು. (ಕ್ರಿ. ಪೂ. ೩೦೨) ಈತನು ಕೆಲವು ವರ್ಷಗಳವರೆಗೂ ಈ ಪಟ್ಟಣದಲ್ಲಿ ವಾಸವಾಗಿದ್ದು, ಆ ಗ್ರಾಮವನ್ನು ಕುರಿತೂ, ಆ ದೇಶವನ್ನು ಕುರಿತೂ, ಅನೇಕಾನೇಕ ವಿಶೇಷಗಳನ್ನು ಬರೆದಿಟ್ಟಿರುವನು. ಆ ಕಾಲದ ಚರಿತ್ರಾಂಶಗಳನ್ನು ತಿಳಕೊಳ್ಳುವುದಕ್ಕೆ ಈ ರಾಯಭಾರಿಯ ಲೇಖನಗಳೇ ಮುಖ್ಯಾಧಾರಗಳಾಗಿವೆ. ಆ ಲೇಖನಗಳನ್ನನುಸರಿಸಿಯೇ ಈ ಕೆಳಗಣ ವರ್ಣನೆಗಳು ಬರೆಯಲ್ಪಡುತ್ತಿವೆ.



### ಪುರವರ್ಣನೆ.

ಮಗಧದೇಶದ ರಾಜಧಾನಿಯಾದ ಪಾಟಲೀಪುರವು ಗಂಗಾ-ಶೋಣಾ ನದಿಗಳ ಸಂಗಮದಿಂದುಂಟಾದ ಅಂತರ್ವೇದಿಯಲ್ಲಿ ಶೋಣಾನದಿಗೆ ಉತ್ತರಭಾಗ

ದಲ್ಲಿಯೂ, ಗಂಗೆಗೆ ದಕ್ಷಿಣಭಾಗದಲ್ಲಿಯೂ ಇದ್ದಿತು. ಈ ಪುರವು ಸುಮಾರು ಒಂಬತ್ತು ಹತ್ತು ಮೈಲುಗಳ ಉದ್ದವೂ ಎರಡುಮೈಲುಗಳ ಅಗಲವೂ ಉಳ್ಳದಾಗಿ ಚತುರ್ಭುಜಾಕಾರವಾಗಿ ನಿರ್ಮಿತವಾಗಿದೆ. ಎಂದರೆ ಇದು ೨೦ ಚದರ ಮೈಲುಗಳ ವಿಸ್ತೀರ್ಣವುಳ್ಳ ನಗರವು. ಅತ್ಯಂತ ಘನವಾದ ಕಾಷ್ಠಪ್ರಾಕಾರದಿಂದ ಆವರಿಸಲ್ಪಟ್ಟು, ಅರವತ್ತುನಾಲ್ಕು ದ್ವಾರಗಳಿಂದಲೂ, ಏಳನೂರಎಪ್ಪತ್ತು ಬುರುಜುಗಳಿಂದಲೂ ಕೂಡಿ ಇದ್ದು, ಶೋಣಾನದಿಯ ನೀರಿಂದ ತುಂಬಿ ತುಂಬ ಅಗಲವೂ ಆಳವೂ ಆದ ಅಗಳ್ತೆಯಿಂದ ರಕ್ಷಿಸಲ್ಪಟ್ಟದ್ದಿತು. ಪಟ್ಟಣದ ಸುತ್ತಲೂ ಇದ್ದ ಆ ಕಂದಕವು ಆರುನೂರು ಅಡಿಗಳ ಅಗಲವೂ, ಮೂವತ್ತು ಮೊಳ ಆಳವೂ ಇದ್ದಿತಂತೆ. ಈ ಪಟ್ಟಣದ ಸುತ್ತಲೂ ಎಪ್ಪತ್ತೈದು ಗಜಗಳಿಗೆ ಒಂದು ಬುರುಜೂ, ಆರುನೂರ ಅರುವತ್ತು ಗಜ ದೂರಕ್ಕೆ ಒಂದೊಂದು ಕೋಟೆಬಾಗಿಲೂ ಇದ್ದಿತು. ಇಪ್ಪತ್ತು ಚದರಮೈಲುಗಳ ವೈಶಾಲ್ಯವೂ, ಇಪ್ಪತ್ತನಾಲ್ಕು ಮೈಲುಗಳ ಸುತ್ತಳತೆಯೂ ಉಳ್ಳ ಆ ನಗರರಾಜವು ಕಲಕತ್ತೆಗೆ ಕಡಿಮೆಯಲ್ಲವೆಂದು ಊಹಿಸಬಹುದು.



## ರಾಜಮಂದಿರವು

ಶೋಣಾನದಿಯ ತೀರದಲ್ಲಿ ನಾನಾವಿಧ ವೃಕ್ಷಜಾತಿಗಳಿಂದ ಶೋಭಿತವಾದ ಉದ್ಯಾನವನವಿದ್ದಿತು. ಅದರಲ್ಲಿ ರಾಜಮಂದಿರವಿದ್ದಿತು. ರಾಜಪ್ರಾಸಾದವು ದಾರುಮಯವಾಗಿ, ಪಾರಸೀಕ ರಾಜಭವನಗಳಾದ ಸ್ಯೂಸಾ, ಎಕ್‌ಬಟಾನಾಗಳಿಗಿಂತ ಹೆಚ್ಚಿನ ವೈಭವದೊಡನೆ ಶೋಭಿಸುತಿದ್ದಿತು. ಅದರ ಕಂಬಗಳೆಲ್ಲವೂ ಸ್ವರ್ಣಖಚಿತಗಳಾಗಿದ್ದು, ಬಂಗಾರದ ಪತಾಕೆಗಳಿಂದಲೂ, ಬೆಳ್ಳಿಯ ಝೂಲರಿಗಳಿಂದಲೂ ಅಲಂಕೃತವಾಗಿದ್ದುವು. ಈ ಭವನವು ಅನೇಕ ಕಟ್ಟಡಗಳಾಗಿ ವಿಭಾಗಿಸಲ್ಪಟ್ಟು ಎಲ್ಲವೂ ಒಂದು ವಿಶಾಲವೂ, ಮನೋಹರವೂ ಆದ ಆರಾಮದಲ್ಲಿ ನಿರ್ಮಿತವಾಗಿದ್ದಿತು. ಇದರಲ್ಲಿ ಮಿರಮಿರನೆಮಿರುಗಿ ಮೆರೆಯುತಲಿದ್ದ ಮತ್ಸ್ಯಗಳಿಂದ ಶೋಭಿಸುವ ಪಲ್ವಲಗಳೂ, ಅನೇಕ ಬಳ್ಳಿಗಳುಳ್ಳ ಶೃಂಗಾರವೃಕ್ಷಗಳೂ, ಪೊದೆಗಳೂ ಶೋಭಿಸುತ್ತಿದ್ದುವು. ಇದರ ಒಳಗಣ ಕಟ್ಟಡಗಳಲ್ಲಿ ಕೆಲವು ರಾಜಕಾರ್ಯಶಾಲೆಗಳು, ಕೆಲವು ಪರಿವಾರ ನಿವಾಸಗಳು, ಕೆಲವು ರಾಜಸ್ತ್ರೀಯರ ಅಂತಃಪುರಗಳು ಇಷ್ಟೇ ಅಲ್ಲದೆ ಸಪ್ತಭೂಮಿಕಾಪ್ರಾಸಾದವೂ, ಸಹಸ್ರಸ್ತಂಭಮಂಟಪವೂ, ದ್ಯೂತಶಾಲೆಯೂ, ಉಷ್ಣಸ್ನಾನವಾಟಿಕೆಯೂ ಇದ್ದುವಂತೆ. ದ್ಯೂತಶಾಲೆಯಲ್ಲಿ ಗೆದ್ದುದರಲ್ಲಿ ಒಂದಂಶವು ರಾಜಸ್ವವಾಗಿ ಸೇರುತಿದ್ದಿತೆಂದು ಆಪಸ್ತಂಬ ವಚನವಿದೆ.

ಸ್ನಾನಶಾಲೆಯಲ್ಲಿ ಮೊದಲು ಪ್ರವೇಶಾಗಾರವೂ, ತದನಂತರ ಉಷ್ಣಜಲಗೃಹವೂ, ಆಮೇಲೆ ಸ್ನಾನಪಲ್ವಲಗಳೂ ಇದ್ದು, ಮಧ್ಯದಲ್ಲಿ ಅಗ್ನಿಕುಂಡವೂ ಅದರ ಸುತ್ತಲೂ ಆಸನಗಳೂ ಇದ್ದುವು. ಸಾಧಾರಣ ಸ್ನಾನಕ್ಕಾಗಿ ವಾಪೀತಟಾಕಗಳು ಉಪಯೋಗಿಸಲ್ಪಡುತ್ತಿದ್ದುವು. ಇವುಗಳಿಗೆ ಕಲ್ಲಪಡಿಕಟ್ಟುಗಳೂ, ಆ ಪಡಿಕಟ್ಟುಗಳ ಮೇಲೆ ವೃಷಾದಿ ಶಿಲ್ಪಾಲಂಕಾರಗಳೂ ಕೆತ್ತಿ ಇದ್ದುವು.

ರಾಜಸಭಾಮಂಟಪವು ಅತ್ಯಂತ ಅಲಂಕಾರಯುಕ್ತವಾಗಿ ಆಡಂಬರಗಳಿಂದ ಒಪ್ಪುತಿದ್ದಿತು. ಆರಡಿ ಅಗಲವುಳ್ಳ ಬಂಗಾರದ ಹರಿವಾಣಗಳೂ, ಬಟ್ಟಲುಗಳೂ ಬಲು ಸೊಗಸಾದ ಕೆತ್ತಿಗೆಯ ಕೆಲಸಗಳಿಂದಲೂ, ಬೆಲೆಯುಳ್ಳ ಹಾಸುಗಳಿಂದಲೂ ಒಪ್ಪಿ, ಮುದ್ದಾದ ಲೋಲುಕಗಳಿಂದ ಅಲಂಕರಿಸಿದ ರಾಜಪೀಠಗಳೂ, ಹಲಗೆಗಳೂ, ರತ್ನಖಚಿತವಾದ ತಾಮ್ರದ ಪಾತ್ರೆಗಳೂ, ಅತಿಸುಂದರಗಳಾದ ಚಿತ್ರವಸ್ತ್ರ ಸಂಚಯಗಳೂ ಕಾಣಬರುತ್ತಿದ್ದುವು. ಇಲ್ಲಿ ಅರಸನು ಸಂಪೂರ್ಣ ಶೋಭೆಯಿಂದ ನೈಮಿತ್ತಿಕ ವೈಭವಕಾರ್ಯಗಳನ್ನಾಚರಿಸುವನು. ಅಂತಹ ಉತ್ಸವ ಕಾಲಗಳಲ್ಲಿ ಆತನು ಮುತ್ತಿನ ಕುಚ್ಚುಗಳಿಂದ ಅಲಂಕರಿಸಿದ ಬಂಗಾರದ ಪಲ್ಲಕ್ಕಿಯನ್ನೇರಿ, ಸ್ವರ್ಣಮಯವಾದ ಪಟ್ಟೆಯ ಹಚ್ಚಡಗಳನ್ನೂ ಸೊಗಸಾದ ಬಟ್ಟೆಗಳನ್ನೂ ಧರಿಸಿ ಸವಾರಿಹೋಗುತ್ತಿದ್ದನು. ಚಿಕ್ಕ ಸವಾರಿಗಳ ಸಮಯದಲ್ಲಿ ಅರಸನು ಅಶ್ವಾರೂಢನಾಗಿಯೂ, ದೊಡ್ಡ ಸವಾರಿಗಳಲ್ಲಿ ಗಜಾರೂಢನಾಗಿಯೂ, ಹೊರಡುವ ಸಮಯಗಳಲ್ಲಿ ಇವು ಬಂಗಾರದ ತೊಡವುಗಳಿಂದ ಶೋಭಿಸುತಿದ್ದುವು. ಮತ್ತು ಇಂತಹ ಸಮಯಗಳಲ್ಲಿ ಎತ್ತು, ಟಗರು, ಆನೆ, ಗಂಡಮೃಗ ಮೊದಲಾದ ಮೃಗಗಳ ಪಂದ್ಯಗಳನ್ನೂ, ಜಟ್ಟಿಕಾಳಗವನ್ನೂ ರಾಜನು ಅತ್ಯುತ್ಸಾಹದಿಂದ ನೋಡುವನು. ಇವುಗಳಲ್ಲಿ ಎತ್ತುಗಳ ಪಂದ್ಯವು ಮಾತ್ರ ಈಗ ನಡೆಯುವುದು ಅಪರೂಪ. ಮಿಕ್ಕವುಗಳು ಹಿಂದೂರಾಜಧಾನಿಯಲ್ಲಿ ಈಗಲೂ ವಾಡಿಕೆಯಲ್ಲಿವೆ. ಇಷ್ಟೇ ಅಲ್ಲದೆ ರಥಗಳಿಗೆ ನಡುವೆ ಕುದುರೆಯನ್ನೂ ಎರಡು ಪಕ್ಕದಲ್ಲಿಯೂ ಎತ್ತುಗಳನ್ನೂ ಕಟ್ಟಿ ಒಂದೂವರೆ ಹರದಾರಿಯ ದೂರದವರೆಗೆ ಓಟದ ಪಂದ್ಯವನ್ನು ಬಿಡುವರಂತೆ.

ನಗರದ ನಿರ್ಮಾಣವು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಆದರೂ ಉನ್ನತವಾದ ಗೋಡೆಗಳೂ, ಬುರುಜುಗಳೂ, ಮುಟ್ಟುಗೋಡೆಗಳೂ, ಕಾಪಿನ ಗೋಪುರಗಳೂ, ಮಹಾದ್ವಾರಗಳೂ, ಕಂದಕಗಳೂ ನಿಸ್ಸಂದೇಹವಾಗಿ ಇದ್ದುವು. ರಾಜನು ಸಾಯಂಕಾಲದ ವಿಹಾರವನ್ನು ಮಾಡುವಾಗ ಪುರಜನರು ಆತನನ್ನು ನೋಡುವುದಕ್ಕಾಗಿ ಮಂದಿರಗಳು ಉಚಿತರೀತಿಯ ಕಿಟಕಿಗಳಿಂದ ಕೂಡಿ ಇದ್ದುವು ನಾಲ್ಕು ದಿಕ್ಕುಗಳಲ್ಲಿಯೂ ಮನೆಗಳಿಂದ ಕೂಡಿದ ಚತುಶ್ಶಾಲೆಗಳೂ ಅನೇಕವಾಗಿದ್ದುವು.

ಸಾಮಾನ್ಯವಾಗಿ ಕಲ್ಲುಕಟ್ಟಡಗಳೇ ಇಲ್ಲ. ತಳಹದಿಗಳು, ಕಂಬಗಳು, ಪಡಿಕಟ್ಟುಗಳು ಹೊರತು ಮಿಕ್ಕುವೆಲ್ಲವೂ ಮರದ ಅಥವಾ ಇಟ್ಟಿಗೆಯ ಕಟ್ಟಡಗಳಾಗಿದ್ದುವು. ಒಳಗೂ ಹೊರಗೂ ಗಚ್ಚುಹಚ್ಚಿ, ಹೂಗಳು, ಬೊಂಬೆಗಳು, ದಂಡೆಯ ಕೆಲಸ, ಬಳ್ಳಿಯ ಕೆಲಸ, ನೂತನವಾದ ಜೋಡಣೆಯ ಕೆಲಸ, ಚಿತ್ರಕೆಲಸ ಮೊದಲಾದುವುಗಳು ಒಪ್ಪುವಂತೆ ದೇದೀಪ್ಯಮಾನವಾಗಿ ಬಣ್ಣಗಳಿಂದ ಬಳಿಯಲ್ಪಟ್ಟಿದ್ದುವು.*



## ಗ್ರಾಮರಕ್ಷಕರ ಸಂಘ.

ಇಂತಹ ರಾಜಧಾನಿಯನ್ನೂ ರಾಜಮಂದಿರವನ್ನೂ ಕಾಪಾಡುವುದಕ್ಕೆ ಮೂವತ್ತುಮಂದಿ ಉದ್ಯೋಗಸ್ಥರ ಸಂಘವೊಂದು ಏರ್ಪಟ್ಟಿದ್ದಿತು. ಇದನ್ನು ಆಗಳಿನ ಮ್ಯುನಿಸಿಪಾಲಿಟಿಯನ್ನಬಹುದಾಗಿದೆ. ಇದರಲ್ಲಿದ್ದ ಮೂವತ್ತುಮಂದಿಯೂ ಆರು ಪಂಚಾಯತಿಗಳಾಗಿ ವಿಭಾಗಿಸಲ್ಪಟ್ಟು, ಒಂದೊಂದು ಪಂಚಾಯತಿಯಲ್ಲಿಯೂ ಐವರು ಉದ್ಯೋಗಸ್ಥರಿರುತ್ತಿದ್ದರು. ಅವುಗಳಲ್ಲಿ ಮೊದಲ ಪಂಚಾಯತಿಯವರು ಪಟ್ಟಣದ ಕಲಾಕೌಶಲ್ಯಾಭಿವೃದ್ಧಿಗೆ ಉತ್ತರವಾದಿಗಳಾಗಿದ್ದರು. ಎಂದರೆ, ಈಗ ನಮ್ಮ ದೇಶಾಭಿಮಾನಿಗಳು ಕೆಲವರು ಮಾಡುತ್ತಿರುವ ಸ್ವದೇಶೋದ್ಯಮದಂತಹ ಉದ್ಯಮಗಳನ್ನು ಈ ಉದ್ಯೋಗಸ್ಥರು ಮಾಡುತ್ತಿದ್ದರು. ಎರಡನೆಯ ಪಂಚಾಯತಿಗಾರರು ಪಾಟಲೀಪುತ್ರಕ್ಕೆ ಬರುವ ಅನ್ಯದೇಶೀಯರನ್ನು ಕಾಪಾಡುತ್ತಿದ್ದರು. ಅನ್ಯದೇಶೀಯರು ರಾಜ್ಯದ ಗುಟ್ಟನ್ನು ಕಂಡುಕೊಳ್ಳಲು ಬಂದ ಮೋಸಗಾರರೋ, ಇಲ್ಲವೇ, ಆವುದೋ ಬೇರೆ ಕಾರ್ಯದಮೇಲೆ ಬಂದವರೋ ಎಂದು ಕಂಡುಕೊಳ್ಳುವುದು; ಬೇರೆ ಕೆಲಸದಮೇಲೆ ಬಂದವರನ್ನು ಗೌರವಿಸುವುದು; ಅವರಿಗೇನೂ ತೊಂದರೆ ಬಾರದಂತೆ ಕಾಪಾಡುವುದು; ಅವರಿಗೆ ಬೇಕಾದ ಭೋಜನಪದಾರ್ಥಗಳನ್ನು ಕೊಡಿಸುವುದು; ಅಸ್ವಸ್ಥದವರಿಗೆ ಔಷಧಗಳನ್ನು ಕೊಡಿಸುವುದು; ಮೃತಿಹೊಂದಿದವರಿಗೆ ಅಂತ್ಯಸಂಸ್ಕಾರಗಳನ್ನು ಮಾಡಿಸಿ ಅವರ ಆಸ್ತಿಯೇನಾದರೂ ಇದ್ದರೆ ಅವರ ಸಂಬಂಧಿಗಳಿಗೆ ಕಳುಹಿಸುವುದು;

*ಕವಿಕುಲಗುರುವಾದ ಕಾಳಿದಾಸಕೃತ ರಘುವಂಶದ ೬ನೆಯ ಸರ್ಗದ ೨೪ನೆಯ ಶ್ಲೋಕದಲ್ಲಿ ಪಾಟಲೀಪುರವನ್ನು ಕುರಿತು "ಪ್ರಾಸಾದವಾತಾಯನ ಸಂಶ್ರಿತಾನಾಂ ನೇತ್ರೋತ್ಸವಂ ಪುಷ್ಪಪುರಾಂಗನಾನಾಂ" ಎಂದರೆ, "ಉಪ್ಪರಿಗೆಯ ಕಿಟಕಿಗಳನ್ನು ಆಶ್ರಯಿಸಿರುವ ಪುಷ್ಪಪುರದ ಸ್ತ್ರೀಯರಿಗೆ ನೇತ್ರೋತ್ಸವವು" ಎಂದು ವರ್ಣಿಸಲ್ಪಟ್ಟಿರುವುದನ್ನು ನೋಡಲುಗಿ, ಉತ್ಸವಾದಿಗಳನ್ನು ನೋಡುವುದಕ್ಕಾಗಿ ಮನೆಗಳಿಗೆ ಗವಾಕ್ಷಗಳನ್ನು ಇಡುತ್ತಿದ್ದರೆಂಬುದು ಸ್ಪಷ್ಟವಾಗುವುದು.

ಇವರ ಕೆಲಸವಾಗಿದ್ದಿತು. ಇದರಿಂದ ಆ ಕಾಲದಲ್ಲಿ ಅನೇಕರು ಪರದೇಶಗಳಿಂದ ನಮ್ಮ ದೇಶಕ್ಕೆ ಬರುತ್ತಿದ್ದರಂತಲೂ, ಚಂದ್ರಗುಪ್ತನಿಗೆ ಅನೇಕ ಪರರಾಜರು ಸ್ನೇಹಿತರಾಗಿದ್ದರಂತಲೂ ತೋರಿಬರುತ್ತಿದೆ. ಮೂರನೆಯ ಪಂಚಾಯತಿಗಾರರು ಊರಿನ ಜನನಮರಣಗಳ ಲೆಕ್ಕಗಳನ್ನು ನೋಡುತ್ತಿದ್ದರು. ನಾಗರಿಕತೆಯನ್ನು ಹೊಂದಿದ ಇಂಗ್ಲೀಷು ದೊರೆತನದವರು ಕೂಡ ಇತ್ತ ಈಚೆಯವರೆಗೂ ಈ ದೇಶದಲ್ಲಿ ಜನನಮರಣಗಳ ಲೆಕ್ಕವನ್ನು ಪ್ರಾರಂಭಿಸಲಿಲ್ಲ; ಪ್ರಾರಂಭಿಸಿ ಸ್ವಲ್ಪಕಾಲ ಮಾತ್ರವಾಯಿತು. ಇಂತಹ ಸ್ಥಿತಿಯಲ್ಲಿ ಎರಡುಸಾವಿರ ವರ್ಷಗಳ ಹಿಂದೆ ಚಂದ್ರಗುಪ್ತನು ಪ್ರಜಾಕ್ಷೇಮವನ್ನು ತಿಳಕೊಳ್ಳುವುದಕ್ಕೂ, ತೆರಿಗೆಗಳನ್ನು ವಿಧಿಸುವುದಕ್ಕೂ, ಸಾಧ್ಯವಾಗುವಂತೆ ಈ ಲೆಕ್ಕಗಳನ್ನು ಬರೆಯಿಸಿದುದನ್ನು ನೋಡಿದರೆ ಆತನ ಬುದ್ಧಿಕೌಶಲಕ್ಕೆ ಯಾರುತಾನೇ ಆಶ್ಚರ್ಯಪಡದಿರರು? ನಾಲ್ಕನೆಯ ಪಂಚಾಯತಿಗಾರರು ವಾಣಿಜ್ಯಾಧಿಕಾರವುಳ್ಳವರಾಗಿದ್ದರು. ಅಳತೆ ತೂಕಗಳು ತಪ್ಪಾಗದಂತೆಯೂ, ಮಾರುವ ವಸ್ತುಗಳಲ್ಲಿ ಮೋಸವಿಲ್ಲದಂತೆಯೂ ನೋಡುವುದು ಇವರ ಕೆಲಸವಾಗಿದ್ದಿತು. ಐದನೆಯ ಪಂಚಾಯತಿಗಾರರು ಕೈಗಾರಿಕೆಗಳ ಮೇಲಣ ಅಧಿಕಾರಿಗಳು. ಅವರು ವರ್ತಕರು ಮಾರಿದ ಸರಕುಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದರು. ಈ ಬಿಡಿಬಿಡಿಯಾದ ಕೆಲಸಗಳಲ್ಲದೆ ಇವರೆಲ್ಲರೂ ಊರೊಳಗಣ ಇತರ ವ್ಯವಹಾರಗಳನ್ನೆಲ್ಲ ನೋಡುತ್ತ, ಗುಡಿಗಳು, ರೇವುಗಳು ಅಂಗಡಿಗಳು ಮೊದಲಾದುವನ್ನು ಕಾಪಾಡುತ್ತಿದ್ದರು. ಇದು ಪಾಟಲೀಪುತ್ರ ರಕ್ಷಣವಿಧಾನವು. ಹೀಗೆಯೇ ಇತರ ಪುರಗಳೆಲ್ಲವೂ ರಕ್ಷಿಸಲ್ಪಡುತ್ತಿದ್ದುವು.



## ಒಂದು ಮಹೋತ್ಸವವು.

ಪಾಟಲೀಪುತ್ರದ ಬೀದಿಗಳಲ್ಲಿ ಡಂಭವಾಗಿ ಜರುಗಿಸಲ್ಪಟ್ಟ ಒಂದು ದಿವ್ಯ ಮಹೋತ್ಸವವನ್ನು ಮೆಗಾಸ್ತನೀಸು ನೋಡಿ ತಿಳಿಸಿದುದನ್ನು ಸ್ಟ್ರಾಬೋ ಎಂಬವನು ಈ ರೀತಿಯಾಗಿ ವರ್ಣಿಸಿರುವನು.

"ಅವರ ಹಬ್ಬಗಳ ಉತ್ಸವಗಳಲ್ಲಿ ಸ್ವರ್ಣರಜತಾಲಂಕೃತಗಳಾದ ಅನೇಕ ಆನೆಗಳು ಒಯ್ಯಾರದಿಂದ ನಡೆದುಬರುವುವು. ನಾಲ್ಕು ಕುದುರೆಗಳನ್ನೂ, ಎತ್ತುಗಳ ಜತೆಗಳನ್ನೂ ಹೂಡಿದ ಲೆಕ್ಕವಿಲ್ಲದ ಬಂಡಿಗಳು ಹಿಂಬಾಲಿಸುವುವು. ಹಿಂದಣಿಂದ ಹೋಗುವ ಚಾರರ ಸಮೂಹಗಳು ಯಾವತ್ತು ತೊಡಿಗೆಗಳನ್ನು ತೊಟ್ಟು ಬಂಗಾರದ ಪಾತ್ರೆಗಳನ್ನೂ, ದೊಡ್ಡ ಹರಿವಾಣಗಳನ್ನೂ, ಅಗಲವಾದ ಬಟ್ಟಲುಗ

ಳನ್ನೂ, ಮೇಜುಗಳು, ಬೆಲೆಯುಳ್ಳ ಕುರ್ಚಿಗಳು, ನೀಲ, ಮರಕತ, ಗರುಡಪಚ್ಚೆ ಕೆಂಪು ಮೊದಲಾದ ರತ್ನಗಳನ್ನು ಕೆತ್ತಿದ ತಾಮ್ರದ ಪಾತ್ರಗಳು ಮೊದಲಾದು ವನ್ನು ಹೊತ್ತುಕೊಂಡು ಬರುತ್ತಿರುವರು. ಬಂಗಾರದ ಕೆತ್ತನೆಯ ಕೆಲಸಮಾಡಿದ ಉತ್ತಮ ವಸ್ತ್ರಗಳನ್ನು ಹೊರುವವರು ಕೆಲವರಿರುವರು. ಅವರ ಹಿಂದಣಿಂದ ಕಾಡುಕೋಣ, ಚಿರತೆ, ದೀಹದ ಸಿಂಹಗಳು, ಹಲವು ಬಣ್ಣದ ರೆಕ್ಕೆಗಳುಳ್ಳ ನಾನಾ ಜಾತಿಯ ಪಕ್ಷಿಗಳು, ಮರಿಗಳು ಮೊದಲಾದುವುಗಳು ತರಲ್ಪಡುತ್ತಿದ್ದುವು.



# ಏಳನೆಯ ಪ್ರಕರಣವು.



## ಸೈನ್ಯವ್ಯವಸ್ಥೆ.

ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿದ್ದ ಈ ಪ್ರಥಮ ಚಕ್ರವರ್ತಿಯ ಕಾಲದಲ್ಲಿಯೇ ನಮ್ಮ ಇಪ್ಪತ್ತನೆಯ ಶತಾಬ್ದದ ರಾಜ್ಯಾಂಗನಿರ್ಮಾಣವನ್ನು ಹೋಲುವ ವಿಶೇಷ ರಾಜ್ಯಾಂಗ ನಿರ್ಮಾಣವಿದ್ದಿತು. ಒಂದೊಂದು ಅಂಗವನ್ನು ವರ್ಣಿಸುವುದಕ್ಕೆ ಒಂದೊಂದು ಪ್ರಕರಣವಾದರೂ ಸಾಲದು. ಪ್ರತಿಭಾಶಾಲಿಯಾದ ಚಂದ್ರಗುಪ್ತನೂ, ಮಂತ್ರಾಲೋಚನಾಧುರೀಣನಾದ ಚಾಣಕ್ಯನೂ ಮಾಡಿದ ರಾಜ್ಯಾಂಗಗಳ ಸ್ವರೂಪವನ್ನು ನಮ್ಮಿಂದಾದಷ್ಟುಮಟ್ಟಿಗೆ ಸಂಕ್ಷೇಪವಾಗಿ ಇಲ್ಲಿ ವಿವರಿಸುವೆವು.



## ಸೈನ್ಯವ್ಯವಸ್ಥೆ

ವಿಸ್ತೀರ್ಣದಲ್ಲಿ ಈಗಿನ ಭರತಖಂಡಕ್ಕಿಂತ ಹೆಚ್ಚಿನ ಭೂಭಾಗವನ್ನು ಚಂದ್ರಗುಪ್ತನಿಗೆ ಸಂಪಾದಿಸಿಟ್ಟ ಸೈನ್ಯದ ಸಂಖ್ಯೆಯು ಅಪರಿಮಿತವಾಗಿದ್ದಿತೆಂದು ಗ್ರೀಕಚರಿತ್ರಕಾರರು ಬರೆದಿರುವರು. ಆ ರಾಜಶ್ರೇಷ್ಠನ ಹತ್ತಿರ ಆರುಲಕ್ಷ ಪದಾತಿದಳವೂ, ೩೦,೦೦೦ ಅಶ್ವಾರೋಹಿಗಳೂ, ೯,೦೦೦ ಆನೆಗಳೂ, ೮,೦೦೦ ರಥಗಳೂ ಇದ್ದುವೆಂದು ಗೊತ್ತಾಗುತ್ತಿದೆ.

ಸಾರಥಿಯಲ್ಲದೆ ಪ್ರತಿರಥದ ಮೇಲೆಯೂ ಇಬ್ಬರು ರಥಿಕರಿರುವರು. ಆದುದರಿಂದ ೮,೦೦೦ ರಥಗಳೆಂದರೆ ೨೪,೦೦೦ ರಥಿಕರೆಂಬ ಅರ್ಥವು. ಪ್ರತಿ ಆನೆಯ ಮೇಲೆ ಮಾವಟಿಗನಲ್ಲದೆ ಮೂವರು ಯೋಧರು ಹತ್ತುತ್ತಿದ್ದರು. ಆದುದರಿಂದ ೯,೦೦೦ ಗಜಗಳೆಂದರೆ ೩೬,೦೦೦ ಯೋಧರೆಂಬ ಅರ್ಥವು. ಹೀಗೆ ಇವರೆಲ್ಲರನ್ನೂ ಲೆಕ್ಕವಿಡಲಾಗಿ ಸುಮಾರು ಏಳುಲಕ್ಷ ಸೇನಾಬಲವಾಗುವುದು.

ಇಷ್ಟು ದೊಡ್ಡ ಸ್ಕಂಧಾವಾರದಲ್ಲಿ ವ್ಯವಸ್ಥೆಯನ್ನು ಕಲ್ಪಿಸಿ, ಒಬ್ಬೊಬ್ಬರಿಗೂ ಅವರವರ ಕೆಲಸಗಳನ್ನು ನಿರ್ಣಯಿಸಿ, ಯಾವ ವೇಳೆಯಲ್ಲಿ ಯಾವ ಅಸಂದರ್ಭವುಂಟಾದರೂ ಅದಕ್ಕದಕ್ಕನುವಾದ ತೆರದಿಂದ ಬಲಗಳನ್ನು ನಡೆಯಿಸಿ ವ್ಯೂಹ ಚಮತ್ಕಾರಗಳನ್ನು ತೋರಿಸಿ, ಚಂದ್ರಗುಪ್ತನು ವಿಜಯವನ್ನು ಹೊಂದಿದನು.

ಸೈನ್ಯವ್ಯವಸ್ಥೆಗಾಗಿ ಈ ಚಕ್ರವರ್ತಿಯು ಮೂವತ್ತು ಅಧಿಕಾರಿಗಳ ಸಂಘವನ್ನು ಏರ್ಪಡಿಸಿ, ಅದನ್ನು ಕೂಡ ಆರು ಪಂಚಾಯತಿಗಳಾಗಿ ವಿಭಾಗಿಸಿದನು. ಮೊದಲನೆಯ ಪಂಚಾಯತಿಯೊಳಗಣ ಅಧಿಕಾರಿಗಳು ಸಮುದ್ರಸೈನ್ಯಕ್ಕೂ, ಎರಡನೆಯ ಪಂಚಾಯತಿಯವರು ರಸ್ತುಸಾಮಗ್ರಿ ಮತ್ತು ಪ್ರಯಾಣ ಪ್ರಯತ್ನಗಳಿಗೂ ಸೈನ್ಯಗಳಿಗೆ ಬೇಕಾದ ಹುಲ್ಲು ಕಟ್ಟಿಗೆಗಳನ್ನು ಸಂಪಾದಿಸುವುದಕ್ಕೂ, ಮೂರನೆಯ ಪಂಚಾಯತಿಯವರು ಕಾಲ್ಬಲಕ್ಕೂ, ನಾಲ್ಕನೆಯವರು ರಥಸೈನ್ಯಕ್ಕೂ ಐದನೆಯವರು ಅಶ್ವಸೈನ್ಯಕ್ಕೂ, ಆರನೆಯವರು ಆನೆಗಳಿಗೂ ಅಧಿಕಾರಿಗಳಾಗಿದ್ದರು. (ಮೆಗಾಸ್ತನೀಸ್)



## ಸಮುದ್ರಸೈನ್ಯವು.

ಈ ಚಕ್ರವರ್ತಿಯ ಹತ್ತಿರ ನೌಕಾಬಲವಿದ್ದಂತೆ ಮೆಗಾಸ್ತನೀಸು ಬರೆದ ಲೇಖನಗಳಿಂದ ಗೊತ್ತಾಗುತ್ತಿದೆ. ಆದರೆ ಆ ಸೈನ್ಯವನ್ನು ಕುರಿತು ವಿವರವಾಗಿ ತಿಳಕೊಳ್ಳುವುದಕ್ಕೆ ಸಾಧನಗಳಾವುವೂ ಕಾಣಬರುವುದಿಲ್ಲ. ಕೌಟಿಲ್ಯನ ಅರ್ಥಶಾಸ್ತ್ರವನ್ನು ಹಿಡಿದು ನೋಡಿದಲ್ಲಿ ಆ ಕಾಲದಲ್ಲಿ "ನಾವಾಧ್ಯಕ್ಷ" ನೆಂಬ ಅಧಿಕಾರಿಯು ಇದ್ದಂತೆಯೂ, ಸಮುದ್ರಗಳಮೇಲೆಯೂ, ಸರಸ್ಸುಗಳಮೇಲೆಯೂ ತಿರುಗುವಂತಹ ಹಡಗುಗಳ ಮೇಲಣ ಅಧಿಕಾರವೆಲ್ಲವೂ ಆತನಲ್ಲಿದ್ದಂತೆಯೂ ಕಂಡುಬರುವುದು. ರೇವುಗಳಲ್ಲಿ ಸುಂಕಗಳನ್ನೆತ್ತುವ ಕೆಲಸವನ್ನು ಕೂಡ ಈತನೇ ತೀರಿಸುತ್ತಿದ್ದನು. ನೌಕಾಚೋರರನ್ನು ದಂಡಿಸುವುದೂ ಗಾಳಿಮಳೆಗಳಿಂದ ತ್ರಸ್ತವಾದ ಹಡಗುಗಳಿಗೆ ಆಶ್ರಯಕೊಡುವುದೂ ಈತನ ಧರ್ಮವಾಗಿದ್ದಿತು. ದೊಡ್ಡದೊಡ್ಡ ನದಿಗಳನ್ನು ದಾಟುವುದಕ್ಕಾಗಿ ಪ್ರಭುತ್ವದವರು ಏರ್ಪಡಿಸಿದ ಹಡಗುಗಳಿಗೂ, ದೋಣಿಗಳಿಗೂ ಅವುಗಳ ಮೇಲಿರುವ ಸೇವಕರಿಗೂ ಈತನೇ ಅಧಿಕಾರಿಯು.



## ರಸ್ತುಸಾಮಗ್ರಿ.

ಎರಡನೆಯ ಪಂಚಾಯತಿಯವರು ರಸ್ತುಸಾಮಗ್ರಿ ಮೊದಲಾದುವುಗಳನ್ನು ಸರಿಗೊಳಿಸಿಡುವವರೆಂದು ಹೇಳಿದೆವು. ಯುದ್ಧಕ್ಕೆ ಸೈನ್ಯವು ಹೊರಡುವಾಗ, ಹೊತ್ತುಹೊತ್ತಿಗೆ ಬೇಕಾದ ಭೋಜನಗಳನ್ನು ಸಿದ್ಧಪಡಸುವುದಕ್ಕೆ ಬೇಕಾದ ಧಾನ್ಯಾದಿಗಳನ್ನೂ ಇತರ ಸಾಮಗ್ರಿಗಳನ್ನೂ, ಯುದ್ಧದಲ್ಲಿ ಗಾಯಹೊಂದುವ

ಭಟರ ಚಿಕಿತ್ಸೆಗಾಗಿ ಔಷಧಗಳನ್ನೂ ಉಪಕರಣಗಳನ್ನೂ, ಕುದುರೆಗಳಿಗೂ ಆನೆಗಳಿಗೂ ಬೇಕಾದ ಹುಲ್ಲು ಮೇವು ಮೊದಲಾದುದನ್ನೂ, ಯುದ್ಧಮಾಡುವಾಗ ಬೇಕಾಗುವ ಆಯುಧಾದಿಗಳನ್ನೂ ಹಿಂದಣಿಂದ ಕಳುಹಿಸುವುದಕ್ಕಾಗಯೇ ಈ ಪಂಚಾಯತಿಯು ಏರ್ಪಟ್ಟಿದ್ದಿತು. ಆ ಕಾಲದಲ್ಲಿ ವೈದ್ಯಶಾಸ್ತ್ರವು ಭರತವರ್ಷದಲ್ಲಿ ತುಂಬ ವೃದ್ಧಿಹೊಂದಿದ್ದಿತು. ಕಾಶೀನಗರದಲ್ಲಿಯೂ, ತಕ್ಷಶಿಲಾನಗರದಲ್ಲಿಯೂ, ನೆಲೆಗೊಳಿಸಿದ ಸರ್ವಕಲಾಭವನಗಳು ಪ್ರಸಿದ್ಧಿಹೊಂದಿದ್ದುವು. ಅಲ್ಲಿ ವಿದ್ಯಾವಂತರಾದ ವೈದ್ಯವಿದ್ಯಾವಿಶಾರದರು ಶಸ್ತ್ರಗಳನ್ನೂ, ಯಂತ್ರಗಳನ್ನೂ, ತೈಲಗಳನ್ನೂ ಕೈಕಾಲು ಮುರಿದುಹೋದವರಿಗೆ ಕಟ್ಟುಗಳನ್ನು ಕಟ್ಟುವುದಕ್ಕೆ ಬಟ್ಟೆಗಳು ಮೊದಲಾದ ವೈದ್ಯೋಪಕರಣಗಳನ್ನೂ ತೆಗೆದುಕೊಂಡು ಸೈನ್ಯವನ್ನು ಹಿಂಬಾಲಿಸಿಹೋಗುತ್ತಿದ್ದರು. ಗಾಯವಡೆದ ಯುದ್ಧಭಟರಿಗೆ ಉಪಚಾರಗಳನ್ನು ಮಾಡಿ ಪಥ್ಯಪಾನಾದಿಗಳನ್ನು ಒದಗಿಸುವುದಕ್ಕಾಗಿ, ಅದಕ್ಕದಕ್ಕೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಧಾತ್ರಿಯರು (ದಾದಿಗಳು) ಇವರೊಡನೆ ಇರುವರು. ಇಂತಹ ದಾದಿಗಳಿಗೆ ಮಾರ್ಗದರ್ಶಿನಿಯೆಂದು ಈಗಿನಕಾಲದಲ್ಲಿ ಲೋಕದಲ್ಲೆಲ್ಲ ಹೆಸರುಗೊಂಡ ಫ್ಲಾರೆನ್ಸ್ ನೈಟಿಂಗೇಲ್ ಎಂಬವಳು ಕಳೆದ ಶತಾಬ್ದದವಳು. ಇಂತಹ ಫ್ಲಾರೆನ್ಸ್ ನೈಟಿಂಗೇಲುಗಳು ಚಂದ್ರಗುಪ್ತ ಚಕ್ರವರ್ತಿಯ ಕಾಲದಲ್ಲೆಷ್ಟೋ ಮಂದಿ ಇದ್ದರು. ಅಂತಹವರನ್ನು ನಿಯಮಿಸುವುದೂ ರಸ್ತುಸಾಮಗ್ರಿಯ ಪಂಚಾಯತಿಯವರ ಕರ್ತವ್ಯವಾಗಿದ್ದಿತು. (ಚಾಣಕ್ಯನ ಅರ್ಥಶಾಸ್ತ್ರ, ೧೦ನೆಯ ಭಾಗ).



## ಕಾಲ್ಬಲಗಳು.

ಚಂದ್ರಗುಪ್ತನ ಕಾಲದಲ್ಲಿ ಪದಾತಿಗಳೆಲ್ಲರೂ ಸಾಮಾನ್ಯವಾಗಿ ಧನುರ್ಧಾರಿಗಳು. ಪ್ರತಿಭಟನೂ ತನ್ನುದ್ದದ ಅಳತೆಗೆ ಸರಿಯಾಗಿ ಬಿಲ್ಲನ್ನು ಹಿಡಿಯುತ್ತಿದ್ದನು. ಬೇಕಾದಾಗ ಅದನ್ನು ಕೆಳಗಿರಿಸಿ, ಹೆದೆಯೇರಿಸಿ, ಕಿವಿಯವರೆಗೂ ಸೆಳೆದು ಮೂರು ಜನಗಳ ಉದ್ದದ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ಈ ಬಾಣಗಳಿಗೆ ಒಡ್ಡಾಣಗಳಾಗಲಿ ಕವಚಗಳಾಗಲಿ, ಮತ್ತೆಷ್ಟು ಬಲಿಷ್ಠವಾದ ಇತರ ರಕ್ಷೆಗಳಾಗಲಿ ಅಡ್ಡವಾಗಿರಲು ಸಾಧ್ಯವಿರಲಿಲ್ಲ. ತಮ್ಮ ಶರೀರಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಹದಮಾಡದ ಚರ್ಮದಿಂದ ಮಾಡಲ್ಪಟ್ಟು, ನಿಂತಾಗ ತಮ್ಮನ್ನು ಪೂರ್ಣವಾಗಿ ಮರೆಮಾಡುವ ಖೇಟಕಗಳನ್ನು ಇವರು ಎಡಗೈಯಲ್ಲಿ ಧರಿಸುತ್ತಿದ್ದರು.

ಈ ಧನುರ್ಧಾರಿಗಳಲ್ಲದೆ ಪದಾತಿಸೈನ್ಯದಲ್ಲಿ ಖಡ್ಗಧಾರಿಗಳೂ ಕೆಲವರಿರುವರು. ಅವರ ಕತ್ತಿಗಳು ಉದ್ದವೂ ಅಗಲವೂ ಇದ್ದು, ಕೈಯ್ಯಕೈ ಯುದ್ಧದಲ್ಲಿ

ಹೆಚ್ಚಾಗಿ ಉಪಯೋಗಕ್ಕೆ ಬೀಳುತ್ತಿದ್ದುವು. ಅಂತಹ ಸಂದರ್ಭದಲ್ಲಿ ಭಟರು ಒಂದೊಂದು ವೇಳೆ ಎರಡೂ ಕೈಗಳಲ್ಲಿ ಖಡ್ಗಗಳನ್ನು ಹಿಡಿದು ಯುದ್ಧಮಾಡುತ್ತಿದ್ದರು. *

ಚಂದ್ರಗುಪ್ತ ಚಕ್ರವರ್ತಿಯ ಬಲಗಳು—ಮೂಲಬಲಗಳು, ಕೃತಬಲಗಳು, ಶ್ರೇಣಿಬಲಗಳು ಎಂದು ಮೂರು ತೆರನಾಗಿದ್ದುವು. ರಾಜನಿಂದ ಶಾಶ್ವತವಾಗಿ ನಿಲ್ಲಿಸಿಕೊಳ್ಳಲ್ಪಟ್ಟಿದ್ದ ಸೈನ್ಯಗಳು ಮೂಲಬಲಗಳು. ಯುದ್ಧಪ್ರಸಂಗ ಬಂದಾಗ ಸಿದ್ಧಗೊಳಿಸಿ, ವೇತನವನ್ನು ಕೊಟ್ಟು ನಿಲ್ಲಿಸಿಕೊಂಡ ಸೈನ್ಯಗಳು ಕೃತಬಲಗಳು. ಶ್ರೇಣಿಬಲಗಳು ಎಂಹ ಪದಕ್ಕೆ ಸ್ವಲ್ಪ ವಿಪುಲವಾಗಿ ವ್ಯಾಖ್ಯಾನಮಾಡಬೇಕಾಗಿದೆ. ದೇಶದಲ್ಲಿ ಅಲ್ಲಲ್ಲಿ ಕ್ಷತ್ರಿಯ ವೀರರ ',ಶ್ರೇಣಿ'' ಗಳು ಎಂದರೆ ಸಂಘಗಳು ನೆಲೆಗೊಂಡಿದ್ದುವು. ಇವರು ಜಾತಿಯಲ್ಲಿ ಕ್ಷತ್ರಿಯರಾದರೂ, ಯಾವುದಾದರೂ ರಾಜ್ಯಾಧಿಕಾರವನ್ನು ಮಾಡಿ, ಯುದ್ಧವಿದ್ಯೆಯನ್ನು ಅಭ್ಯಾಸಮಾಡಿಯೂ ಇತರ ವೃತ್ತಿಗಳಿಂದ ಜೀವನವನ್ನು ನಡೆಯಿಸುತ್ತಿದ್ದರು. ಇವರ ಸಹಾಯವನ್ನು ಯುದ್ಧದಲ್ಲಿ ಚಕ್ರವರ್ತಿಗಳು ಹೊಂದುತ್ತಿದ್ದರು. ಇವರೇ ಶ್ರೇಣಿಗಳು. ಆ ಕಾಲದಲ್ಲಿ ಇಂತಹ ಶ್ರೇಣಿಗಳಲ್ಲಿ ಕಾಂಭೋಜ, ಸೌರಾಷ್ಟ್ರ, ಲಿಕ್ಷವಿ, ವ್ರಿಜಕ, ಮಲ್ಲಕ, ಮದ್ರಕ, ಕುಕುರು, ಕರು, ಪಾಂಚಾಲ ಮೊದಲಾದುವುಗಳು ಪ್ರಸಿದ್ಧವಾದುವು. × ಅವುಗಳಲ್ಲಿ ಕಾಂಭೋಜ ಸೌರಾಷ್ಟ್ರಗಳವರು ಕೃಷಿಕರಾಗಿಯೂ, ವರ್ತಕರಾಗಿಯೂ ಕಾಲಕಳೆಯುತ್ತಿದ್ದರು. ಮಿಕ್ಕವರು ರಾಜರೆಂದು ಕರೆಯಲ್ಪಡುತ್ತಿದ್ದರು. ಪ್ರತಿಶ್ರೇಣಿಯೂ ಒಬ್ಬ ನಾಯಕನ ಒಳಗಾಗಿ ಪ್ರವರ್ತಿಸುತ್ತಿದ್ದಿತು.

ಈ ಮೂರು ತೆರನಾದ ಬಲಗಳಲ್ಲದೆ ಆರಣ್ಯಕರೂ, ಪಾರ್ವತೀಯರೂ ಸಂದರ್ಭವಶದಲ್ಲಿ ವಿಶೇಷ ಸೈನ್ಯಾಂಗವಾಗಿ ಉಪಯೋಗಿಸಲ್ಪಡುತ್ತಿದ್ದರು. ಸೋತವರನ್ನು ದೋಚಿಕೊಳ್ಳುವುದೇ ಇವರಿಗೆ ವೇತನವಾಗಿದ್ದಿತು.

ಹೀಗೆ ಏರ್ಪಟ್ಟ ಕಾಲ್ಬಲಕ್ಕೆ ನಾಯಕನಾಗುವವನೇ ಸರ್ವಸೈನ್ಯಕ್ಕೂ ಅಧ್ಯಕ್ಷನು.



## ಕುದುರೆಯ ಸೈನ್ಯ.

ಕುದುರೆಯ ಸೈನ್ಯದಲ್ಲಿ ಪ್ರತಿಯೊಬ್ಬ ಭಟನೂ ಎರಡು ಈಟಿಗಳನ್ನೂ ಢಾಲನ್ನೂ ಯುದ್ಧಕ್ಕೆ ತೆಗೆದುಕೊಂಡು ಹೋಗುತ್ತಿದ್ದನು. ಈತನ ಢಾಲು ಪದಾ

*ಆರ್ರಿಯನ್ ಎಂಬ ಗ್ರೀಕ್ ಲೇಖಕನ ಟೀಖಿನವನ್ನನುಸರಿಸಿ ಬರೆದಿದೆ.

× ಚಾಣಕ್ಯನ ಅರ್ಥಶಾಸ್ತ್ರ, ೧೧ನೆಯ ಭಾಗ, ೧ನೆಯ ಪ್ರಕರಣ.

ತಿಸೈನ್ಯದವನ ಢಾಲಿಗಿಂತಲೂ ಕುರುಚಾಗಿರುವುದು. ಕುದುರೆಯ ಮೇಲೆ ಜೀನನ್ನು ಹಾಕುವುದು ಆಚಾರವಲ್ಲ. ಕುದುರೆಗಳಿಗೆ ಕಡಿವಾಣಗಳನ್ನು ಹಾಕುವುದೂ ಇಲ್ಲ. ಆದರೆ ಗುಂಡಾಗಿ ಹೊಲಿಯಲ್ಪಟ್ಟ ಎತ್ತಿನ ಚರ್ಮದ ಮುಚ್ಚಳದಿಂದ ಅವುಗಳ ಮುಖಗಳು ಮುಚ್ಚಲ್ಪಡುತ್ತಿದ್ದುವು. ಆ ಮುಚ್ಚಳದ ಒಳಭಾಗದಲ್ಲಿ ಕಬ್ಬಿಣ, ಹಿತ್ತಾಳಿ, ಅಥವಾ ದಂತದ ಮುಳ್ಳುಗಳು ನೆಟ್ಟು ಇದ್ದುದರಿಂದ ಅದೇ ಕಡಿವಾಣದಂತೆ ಉಪಯೋಗಕ್ಕೆ ಬೀಳುತ್ತಿದ್ದಿರಬಹುದು. *

ಯುದ್ಧಕ್ಕಾಗಿ ಕುದುರೆಗಳಿಗೆ ವಲ್ಗನ, ಲಂಘನ ಇತ್ಯಾದಿ ಅನೇಕ ಗತಿವಿಶೇಷಗಳನ್ನು ಕಲಿಸುತ್ತಿದ್ದರು. ಯುದ್ಧಭೂಮಿಯಲ್ಲಿಯೂ, ಅರಣ್ಯಗಳಲ್ಲಿಯೂ ಮಧ್ಯಭಾಗದಲ್ಲಿ ನಿಂತು, ಮಿಕ್ಕ ಸೈನ್ಯವನ್ನು ಸೇರುವುದಕ್ಕೆ ಗುರಿಯಾಗುವುದಕ್ಕೂ, ಸೈನ್ಯೋಪಯೋಗಕ್ಕೆ ತಕ್ಕ ಜಂತುಗಳು ಪ್ರವಾಹಗಳನ್ನು ದಾಟಬೇಕಾದಾಗಲೂ, ಬಿರುಗಾಳಿಯಲ್ಲಿ ಪ್ರಯಾಣಮಾಡಬೇಕಾದಾಗಲೂ, ಚದರಿಹೋಗದಂತೆ ಅವುಗಳಿಗೆ ಕಟ್ಟಿದ ಹಗ್ಗವನ್ನು ಹಿಡಿದುಕೊಳ್ಳುವುದಕ್ಕೂ, ತಮ್ಮ ರಸ್ತು ಸಾಮಗ್ರಿಗಳನ್ನು ಕಾಪಾಡಿಕೊಳ್ಳುವುದಕ್ಕೂ, ಶತ್ರುಗಳ ರಸ್ತುಸಾಮಗ್ರಿಗಳನ್ನು ಕೊಳ್ಳೆ ಹೊಡೆಯುವುದಕ್ಕೂ, ಹೊಸದಾಗಿ ತಮ್ಮ ಸಹಾಯಾರ್ಥ ಬರುವ ದಂಡುಗಳನ್ನು ರಕ್ಷಿಸಿಕೊಳ್ಳುವುದಕ್ಕೂ, ಶತ್ರುಗಳ ಸಹಾಯಕ್ಕಾಗಿ ಬರುವ ದಂಡುಗಳನ್ನು ಚೆದರಿಸುವುದಕ್ಕೂ, ತಮ್ಮ ಸೈನ್ಯವನ್ನು ಸುಶಿಕ್ಷಿತವಾಗಿಟ್ಟುಕೊಳ್ಳುವುದಕ್ಕೂ, ಸಮಯ ಬಂದಾಗ ಹೆಚ್ಚಾಗಿ ಕಾಣಿಸಿಕೊಳ್ಳುವಂತೆ ಮಾಡುವುದಕ್ಕೂ, ಸೈನ್ಯಪಾರ್ಶ್ವಂಗಗಳನ್ನು ಸಂರಕ್ಷಿಸಿಕೊಳ್ಳುವುದಕ್ಕೂ, ಯುದ್ಧವು ಆರಂಭವಾದಾಗ, ಮೊದಲು ಸೈನ್ಯದಮೇಲೆ ಬಿದ್ದು ಶತ್ರುಬಲಗಳನ್ನು ದಿಕ್ಕುಪಾಲಾಗಿ ಮಾಡಿಸುರಿದುಬಿಡುವುದಕ್ಕೂ, ತಮ್ಮ ಬಲಗಳನ್ನು ವೈರಿಗಳು ಆಕ್ರಮಿಸುವಲ್ಲಿ ಅಡ್ಡಕಟ್ಟುವುದಕ್ಕೂ, ಅವರನ್ನು ಹಿಡಿಯುವುದಕ್ಕೂ, ಸೆರೆಸಿಕ್ಕಿದವರನ್ನು ಹಿಡಿದುತರುವುದಕ್ಕೂ, ತಮ್ಮ ಸೈನ್ಯದ ಮಾರ್ಗಗಳನ್ನು ಭದ್ರವಾಗಿಡುವುದಕ್ಕೂ, ರಾಜರನ್ನೂ ಧನವನ್ನೂ ಹೊತ್ತುಕೊಂಡು ಹೋಗುವುದಕ್ಕೂ, ಶತ್ರುಗಳ ಬೆನ್ನುಹಿಡಿದು ಓಡಿಸುವುದಕ್ಕೂ, ಓಡಿಹೋಗುವ ವೈರಿಗಳನ್ನು ತರುಬುವುದಕ್ಕೂ, ಜಯಿಸಿದ ಸ್ಥಾನಗಳನ್ನು ಬಲಪಡಿಸಿ ಇಟ್ಟುಕೊಳ್ಳುವುದಕ್ಕೂ ಕುದುರೆಯ ಸವಾರರ ಸೈನ್ಯವು ಅಗತ್ಯಬೀಳುತ್ತಿದ್ದಿತು.

ಈ ಅಶ್ವಾರೋಹಿ ಸೈನ್ಯಗಳಿಗೆ ಬೇಕಾದ ಉತ್ತಮಾಶ್ವಗಳು ಕಾಂಭೋಜ, ಸಿಂಧು, ಆರಟ್ಟ, ವನಾಯು, ಬಾಹ್ಲೀಕ, ಸೌವೀರ, ಪಾಪೇಯ, ತೈತಲ ದೇಶ

*ಆರ್ಡಿಯನ್ ಎಂಬ ಗ್ರೀಕ್ ಲೇಖಕನು.

ಗಳಿಂದ ಬರುತ್ತಿದ್ದುವು. ಇವುಗಳಲ್ಲಿ ಕಾಂಭೋಜ, ಸಿಂಧು, ಆರಟ್ಟ, ವನಾಯು ದೇಶಗಳ ಕುದುರೆಗಳು ಶ್ರೇಷ್ಠವಾಗಿ ಎಣಿಸಲ್ಪಡುತ್ತಿದ್ದುವು. ×

ಕುದುರೆಗಳ ಮೇಲಣ ಅಧಿಕಾರಿಗಳಿಗೆ ಅಶ್ವಾಧ್ಯಕ್ಷನೆಂದು ಹೆಸರು. ತೀಕ್ಷ್ಣ, ಭದ್ರ, ಮಂದಗಳೆಂಬ ಗುಣಗಳನ್ನನುಸರಿಸಿಯೂ, ಅವುಗಳ ಜನ್ಮಸ್ಥಳಗಳನ್ನನುಸರಿಸಿಯೂ, ಕುದುರೆಗಳ ತರಗತಿಗಳನ್ನೇರ್ಪಡಿಸಿ ಲೆಕ್ಕಗಳನ್ನು ಬರೆಯಿಸುವುದೂ ಅವುಗಳಿಗೆ, ಯುದ್ಧದಲ್ಲಿಯೂ ಇತರ ಸಮಯಗಳಲ್ಲಿಯೂ ಕೆಲಸಕ್ಕೆ ಬರುವ ನಾನಾನಡೆಗಳನ್ನು * ಕಲಿಸುವುದೂ, ವಿಶಾಲವಾದ ಕುದುರೆ ಲಾಯಗಳನ್ನು ಕಟ್ಟಿಸುವುದೂ, ಅಶ್ವಚಿಕಿತ್ಸಕರನ್ನು ಏರ್ಪಡಿಸಿ, ಅವರಿಂದ ಕೆಲಸವನ್ನು ತೆಗೆದುಕೊಳ್ಳುವುದೂ, ಮತ್ತು ಇತರ ವಿಧಗಳಿಂದ ಕುದುರೆಗಳನ್ನು ಸಾಕಿ ಕಾಪಾಡುವುದೂ, ಈ ಅಧ್ಯಕ್ಷನ ಕರ್ತವ್ಯವಾಗಿದ್ದಿತು. ಕುದುರೆಗಳಿಗೆ ಉಪಚಾರವನ್ನು ಮಾಡುವುದಕ್ಕೆ ಈ ಕೆಳಗಣ ಕ್ಷುದ್ರ ಸೇವಕರು ನಿಯಮಿಸಲ್ಪಡುತ್ತಿದ್ದರು.

೧. ಸೂತ್ರಗ್ರಾಹಕ—ಕೀಳು ಚಾಕರಿಯನ್ನು ಮಾಡುವವನು.
೨. ಅಶ್ವಬಂಧಕ—ಕುದುರೆಗಳನ್ನು ಕಟ್ಟಿಹಾಕುವವನು.
೩. ಯಾವಸಿಕನು—ಹುಲ್ಲುತರುವವನು.
೪. ವಿಧಾಪಾಚಕನು—ಕುದುರೆಯ ಗೊರಸು, ಕಿವಿ ಮೊದಲಾದವುಗಳನ್ನು ಶುಭ್ರವಾಗಿಡುವವನು.
೫. ಸ್ಥಾನಪಾಲಕನು—ಅಶ್ವಶಾಲೆಯನ್ನು ರಕ್ಷಿಸುವವನು.
೬. ಕೇಶಕಾರನು—ಕೂದಲುಗಳನ್ನು ಕತ್ತರಿಸಿ ಕುದುರೆಗಳನ್ನು ನುಣುಪಾಗಿಡುವವನು.
೭. ಜಾಂಗಲಿಕನು—ಆಹಾರಾದಿಗಳನ್ನು ಪರೀಕ್ಷಿಸುವವನು.



---

× ಕಾಂಭೋಜವೆಂದರೆ ಅಫಘಾನಿಸ್ಥಾನವು. ಸಿಂಧುವು ನಾವರಿತುದೇ. ಆರಟ್ಟವೆಂಬುದು ಪಂಜಾಬಿನೊಳಗಣ ಆರಾಷ್ಟ್ರ ದೇಶವು. ವನಾಯುವೆಂದರೆ ಅರಬ್ಬೀ ದೇಶವು. ಬಾಹ್ಲೀಕವೆಂದರೆ ಮಧ್ಯಆಸಿಯದೊಳಗಣ ಬಾಲಖಪಟ್ಟಣದ ಸುತ್ತುಮುತ್ತಲಿನ ಪ್ರದೇಶವು. ಸೌವೀರವೆಂದರೆ ಗುಜರಾತು ದೇಶದಲ್ಲಿರುವ ಇದಾರ್ ರಾಷ್ಟ್ರವು, ಪಾಪೇಯ ತೈತಲ ದೇಶಗಳು ಮಾತ್ರ ಯಾವುವೋ ತಿಳಿಯದು, ಕಂಡುಕೊಳ್ಳಬೇಕಾಗಿದೆ.

*ಯುದ್ಧ ಸಮಯದಲ್ಲಿಯ ನಡಿಗೆಗಳಿಗೆ "ಔಪವಾಹ್ಯಕ" ಗತಿಗಳೆಂದೂ, ಶಾಂತಸಮಯದಲ್ಲಿ ಮಾಡುವ ಸವಾರಿಯ ಸಂಬಂಧವಾದ ನಡಿಗೆಗಳಿಗೆ "ಸನ್ನಾಹ್ಯ" ಗತಿಗಳೆಂದೂ ಹೆಸರು.

## ಆನೆಗಳು.

ನಮ್ಮ ದೇಶದ ಪ್ರಾಚೀನಕಾಲದ ಸೈನ್ಯಗಳ ಅಂಗಗಳಲ್ಲಿ ಗಜಾಂಗವು ಹೆಚ್ಚಿನ ಉಪಯೋಗಕಾರಿಯಾಗಿದ್ದಂತೆ ಕಂಡುಬರುತ್ತಿದೆ. ಚಂದ್ರಗುಪ್ತನ ಕಾಲದಲ್ಲಿ ಪ್ರತಿಗಜದಮೇಲೆಯೂ ಮಾವಟಿಗನ ಹೊರತು ಮೂವರು ಯೋಧರು ಏರುತ್ತಿದ್ದರು. ಆ ಮೂವರೂ ಧನುರ್ಧಾರಿಗಳು. ಇಬ್ಬರು ಬದಿಗಳಿಂದಲೂ, ಮೂರನೆಯವನು ಹಿಂದಣಿಂದಲೂ ಬಾಣಗಳನ್ನು ಹೊಡೆಯುತ್ತಿದ್ದರು (ಮೆಗಾಸ್ತನಿಸ್). ಆ ಕಾಲದಲ್ಲಿ ಆನೆಯ ಸೈನ್ಯವು ಯುದ್ಧಸಮಯದಲ್ಲಿ ಮಾಡುತ್ತಿದ್ದ ಕೆಲಸಗಳಾವುವೆಂದರೆ:—ಸರ್ವಸೇನಾಮುಖದಲ್ಲಿ ನಡೆವುದು, ಸೈನ್ಯವುನಡೆವುದಕ್ಕೆ ಮಾರ್ಗಗಳನ್ನೂ, ಶಿಬಿರಸ್ಥಾನಗಳನ್ನೂ, ನೀರು ತರುವುದಕ್ಕೆ ದಾರಿಗಳನ್ನೂ ಸಿದ್ಧಗೊಳಿಸುವುದು, ಸೈನ್ಯವನ್ನು ಸುತ್ತಲೂ ಆವರಿಸಿ ರಕ್ಷಿಸುವುದು. ಇತರ ಅಂಗಗಳು ಚಲಿಸಿದರೂ ತಾವು ಚಲಿಸದೆ ಇದಿರೊಡ್ಡಿ ನಿಲ್ಲುವುದು, ಪ್ರವಾಹಗಳು ಅಡ್ಡಬಂದಾಗ ಸೇನೆಗಳನ್ನು ದಾಟಿಸುವುದು, ಅಭೇದ್ಯ ಸ್ಥಳಗಳನ್ನು ಬಲದಿಂದ ಭೇದಿಸುವುದು, ಶತ್ರುಸೈನ್ಯಗಳಿಗೆ ಬೆಂಕಿ ಹೊತ್ತಿಸಿ, ಸ್ವಸೈನ್ಯಕ್ಕೆ ತಗುಲಿದ ಅಗ್ನಿಬಾಧೆಯನ್ನು ನಿವಾರಿಸುವುದು, ಚೆದರಿದ ಸೈನ್ಯವನ್ನು ಒಂದುಕಡೆ ಕೂಡಿಸುವುದು, ವೈರಿಗಳ ಅಡ್ಡಕಟ್ಟುಗಳನ್ನು ಒಡೆವುದು, ವೈರಿಗಳನ್ನು ಹುಂಕಾರದಿಂದ ಬೆದರಿಸುವುದು, ಅವರನ್ನು ತುಳಿದು ನಾಶಗೊಳಿಸುವುದು, ಕೋಟೆಗಳ ಗೋಡೆಗಳನ್ನೂ ದುರ್ಗದ್ವಾರಗಳನ್ನೂ, ಬುರುಜುಗಳನ್ನೂ ಡೀ ಹೊಡೆದು ಕೆಡಹುವುದು, ಹಣವನ್ನು ಹೊತ್ತುಕೊಂಡು ಹೋಗುವುದು. ಇವುಗಳಲ್ಲಿ ದುರ್ಗಗಳನ್ನು ಸಾಧಿಸುವುದೇ ಮುಖ್ಯತಮವು.

ಈ ರೀತಿಯಾಗಿ ಉಪಯುಕ್ತವಾದುದರಿಂದ, ಆನೆಗಳೆಂದರೆ ಚಕ್ರವರ್ತಿಗೆ ಮಹಾಪ್ರೀತಿ. ಅವುಗಳ ಸಂರಕ್ಷಣೆಗಾಗಿ, ಒಬ್ಬ ಅಧ್ಯಕ್ಷನೂ, ಅನೇಕ ಅಧಿಕಾರಿಗಳೂ, ಲೆಕ್ಕವಿಲ್ಲದ ಕೀಳು ಸೇವಕರೂ ನಿಯಮಿಸಲ್ಪಟ್ಟಿದ್ದರು. ಅವುಗಳಿಗಾಗಿ ದೊಡ್ಡ ದೊಡ್ಡ ಅಡವಿಗಳನ್ನೇ ಬಿಟ್ಟಿದ್ದರು. ಅವುಗಳಿಗೇನಾದರೂ ನೋಯಿಸಿದಲ್ಲಿ ಅವರಿಗೆ ತಪ್ಪದೆ ಶಿಕ್ಷೆಯಾಗುತ್ತಲಿದ್ದಿತು. ಆನೆಯ ಲಾಯಗಳಲ್ಲಿ ಕಸವಿರಗೊಡಿಸಿದರೂ, ಸರಿಯಾಗಿ ಆಹಾರವಿಡದೆ ಹೋದರೂ, ಮೆತ್ತನಾದ ಸ್ಥಳವಲ್ಲಲ್ಲದೆ ಕೆಟ್ಟ ಎಡೆಗಳಲ್ಲಿ ಮಲಗಿಸಿದರೂ, ಮರ್ಮಸ್ಥಾನಗಳಿಗೆ ಪೆಟ್ಟು ಹೊಡೆದರೂ, ಅವುಗಳ ಮೇಲೆ ಇತರರನ್ನು ಏರಗೊಡಿಸಿದರೂ, ತಕ್ಕುವಲ್ಲದ ಸಮಯಗಳಲ್ಲಿ ಅವನ್ನೇರಿದರೂ, ಇಕ್ಕಟ್ಟಾದ ಓಣಿಗಳೊಳಗಿಂದ ಅವನ್ನು ಜಲಾಶ್ರಯಗಳಿಗೆ ನೀರು ಕುಡಿಸಲು ಕೊಂಡುಹೋದರೂ, ದಟ್ಟವಾದ ಅಡವಿಗಳೊಳಗೆ ಹೋಗ

ಗೊಟ್ಟರೂ—ಇವೆಲ್ಲ ಅಪರಾಧಗಳಾಗಿ ತಿಳಿಯಲ್ಪಟ್ಟು ಈ ಅಪರಾಧಗಳಿಗೆ ಕಠಿಣ ದಂಡನೆಯಾಗುತ್ತಿದ್ದಿತು. ಆನೆಯನ್ನು ಕೊಂದವನಿಗೆ ಮರಣದಂಡನೆಯುಂಟಾಗುತ್ತಿದ್ದಿತು.*

ಈ ಕಾಲದಂತೆಯೇ ಆ ಕಾಲದಲ್ಲಿಯೂ, ಆನೆಗಳು ತಮ್ಮನ್ನು ಸಾಕಿದ ಮಾವಟಿಗರಲ್ಲಿ ಹೆಚ್ಚಿನ ವಿಶ್ವಾಸವಿಟ್ಟು ಯುದ್ಧದಲ್ಲಿ ಅವರನ್ನು ರಕ್ಷಿಸುತ್ತಿದ್ದುವು. ಇದನ್ನು ಕುರಿತು ಚಂದ್ರಗುಪ್ತನ ಆಸ್ಥಾನದಲ್ಲಿ ಗ್ರೀಕರ ಪ್ರತಿನಿಧಿಯಾಗಿದ್ದ ಮೆಗಾಸ್ತನೀಸು ಒಂದು ವಿಚಿತ್ರವಾದ ಕಥೆಯನ್ನು ಬರೆದಿರುವನು:—

ಒಬ್ಬ ಭಾರತೀಯನಿಗೆ ಬಿಳಿಯ ಆನೆಯಮರಿಯೊಂದು ಸಿಕ್ಕಿತು. ಅದನ್ನು ಅವನು ಸಾಕಿ ವಾಹನವಾಗಿ ಉಪಯೋಗಿಸಿಕೊಳ್ಳುತ್ತಿದ್ದನು. ದಿನದಿನಕ್ಕೂ ಅದರಲ್ಲಿ ಅವನಿಗೆ ಅನುರಾಗವು ಹೆಚ್ಚುತ್ತ ಬಂದಿತು. ಅದೂ ತನ್ನ ಯಜಮಾನನಲ್ಲಿ ವಿಶ್ವಾಸವನ್ನು ತೋರಿಸುತ್ತಿದ್ದಿತು. ಹೀಗಿರಲು, ರಾಜನಿಗೆ ಅದನ್ನು ಅಪಹರಿಸಬೇಕೆಂಬ ದುರಾಶೆಯುಂಟಾಯಿತು. ಆದರೆ ಅದರ ಯಜಮಾನನಿಗೆ ಆ ಪ್ರಾಣಿಯಮೇಲೆ ಹೆಚ್ಚಿನ ಪ್ರೇಮವಿದ್ದುದರಿಂದಲೂ, ಇತರರ ವಶದಲ್ಲಿ ಅದನ್ನು ಇಡುವುದಕ್ಕೆ ಬುದ್ಧಿ ಹುಟ್ಟದೆ ಹೋದುದರಿಂದಲೂ, ಆತನು ಅದರೊಡನೆ ದೇಶವನ್ನೇ ಬಿಟ್ಟು ಅಡವಿಗೆ ಓಡಿಹೋದನು. ಈ ವಾರ್ತೆಯನ್ನು ಕೇಳಿ ಅರಸನು ಕೋಪೋದ್ದೀಪಿತನಾಗಿ, ಆ ಆನೆಯನ್ನೂ ಮನುಷ್ಯನನ್ನೂ ಹಿಡಿದು ತರುವುದಕ್ಕೆ ತನ್ನ ಪರಿವಾರವನ್ನು ಕಳುಹಿಸಿದನು. ಅವರು ಹೊರಟುಹೋಗಿ ಆ ಆನೆಯನ್ನೂ ಅದರ ಯಜಮಾನನನ್ನೂ ಸಂಧಿಸಿದರು. ಆನೆಯ ಮೇಲಿದ್ದು ಅವನು ಆ ರಾಜಭಟರೊಡನೆ ಹೋರಾಡಿದನು. ಅವನಿಗೆ ಆನೆಯು ಕೂಡಾ ಸಹಾಯವನ್ನು ಮಾಡಿತು. ಆದರೂ ರಾಜಭಟರು ಅನೇಕರಿದ್ದುದರಿಂದ ಅವನು ಗಾಯವಡೆದು ಸೋತು ಕೆಳಗೆ ಬಿದ್ದನು. ಯುದ್ಧದಲ್ಲಿ ಬಿದ್ದ ಭಟನನ್ನು ಆತನೊಡನಿದ್ದವರು ತಮ್ಮ ಧಾಲುಗಳಿಂದ ಮರೆಮಾಡುತ್ತಿರುವುದನ್ನು ನೋಡಿ, ಈ ಆನೆಯೂ ತನ್ನ ಯಜಮಾನನಿಗೆ ಅಡ್ಡಲಾಗಿ ನಿಂತು, ಶತ್ರುಗಳಲ್ಲಿ ಕೆಲವರನ್ನು ಕೊಂದು ಮಿಕ್ಕವರನ್ನು ಓಡಿಸಿಬಿಟ್ಟಿತು. ಬಳಿಕ ಆತನನ್ನು ತನ್ನ ಸೊಂಡಿಲಿಂದ ಎತ್ತಿ ಬೆನ್ನಮೇಲಿಟ್ಟುಕೊಂಡು ತನ್ನ ಲಾಯಕ್ಕೆ ಹೋಗಿ ಸ್ನೇಹಿತನಂತೆ ಆತನ ಪಕ್ಕದಲ್ಲಿದ್ದು ದುಃಖಿಸುತ್ತಿದ್ದಿತು. ×



---

*ಚಾಣಕ್ಯನ ಅರ್ಥಶಾಸ್ತ್ರ, ೨ನೆಯ ಭಾಗ ೪೨ನೆಯ ಪ್ರಕರಣ.

× Macrindle's Megasthenes, page 118

## ರಥಗಳು.

ರಾಮಾಯಣ ಮಹಾಭಾರತಾದಿ ಕಾಲಗಳಿಂದಲೂ, ನಮ್ಮ ದೇಶದಲ್ಲಿ ಮಹಾಯೋಧರು ರಥಾರೂಢರಾಗಿಯೇ ಯುದ್ಧಮಾಡುತ್ತಿದ್ದಂತೆ ಕಂಡುಬರುತ್ತಿದೆ. ಸಾಧಾರಣ ಸೈನಿಕರು ಮಾತ್ರ ನೆಲದಮೇಲೆ ನಿಂತು ಯುದ್ಧ ಮಾಡುತ್ತಿದ್ದರು. ಚಂದ್ರಗುಪ್ತನ ಕಾಲದಲ್ಲಿ ಸಾಧಾರಣವಾಗಿ ರಥಕ್ಕೆ ಎರಡು ಕುದುರೆಗಳನ್ನು ಹೂಡುತ್ತಿದ್ದರು. ನಾಲ್ಕು ಕುದುರೆಗಳ ರಥಗಳೂ ಇದ್ದುವು. ಪ್ರತಿರಥದ ಮೇಲೆಯೂ ಸಾರಥಿಯಲ್ಲದೆ ಇಬ್ಬರು ರಥಿಕರಿರುವರು. ಕೆಲವು ರಥಗಳಮೇಲೆ ಇಬ್ಬರು ಸಾರಥಿಗಳೂ, ಇಬ್ಬರು ಧನುರ್ಧಾರಿಗಳೂ, ಇಬ್ಬರು ಹಲಗೆಯನ್ನು ಹಿಡಿದವರೂ ಇರುವರು. ಕೆಲಸ ಬಿದ್ದಾಗ ಸಾರಥಿಗಳು ಕೂಡ ಸಮರರಂಗದಲ್ಲಿ ತಮ್ಮ ಶೌರ್ಯವನ್ನು ತೋರಿಸಿ ತಮ್ಮ ಕೆಲಸಗಳನ್ನು ನೆರವೇರಿಸುತ್ತಿದ್ದರು. *
ಇಂತಹ ರಥಸೈನ್ಯಕ್ಕೆ ರಥಾಧ್ಯಕ್ಷನೆಂಬ ಅಧಿಕಾರಿಯು ಇದ್ದನು. ಯುದ್ಧಕ್ಕೆತಕ್ಕ ರಥಗಳನ್ನು ಸಿದ್ಧಗೊಳಿಸಿಡುವುದು ಅವನ ಕೆಲಸವಾಗಿದ್ದಿತು.



## ಸೈನ್ಯದೊಳಗಣ ಅಧಿಕಾರಿಗಳ ಪರಂಪರೆ.

ಚತುರಂಗದೊಳಗಣ ಒಂದೊಂದು ಅಂಗದಲ್ಲಿ ಹತ್ತುಮಂದಿ ಭಟರಮೇಲಿನ ಅಧಿಕಾರಿಯು ಪಥಿಕನು. ಅಂತಹ ಪಥಿಕರು ಹತ್ತುಮಂದಿಯ ಮೇಲಣ ಅಧಿಕಾರಿಗೆ ಸೇನಾಪತಿಯೆಂದು ಹೆಸರು. ಅಂತಹ ಸೇನಾಪತಿಗಳು ಹತ್ತುಮಂದಿಗೆ ಒಬ್ಬ ನಾಯಕನು. ಅಂತಹ ನಾಯಕರಿಗೂ, ಸರ್ವಸೈನ್ಯಕ್ಕೂ ಅಧಿಕಾರಿಯಾದವನು ಸೇನಾಮುಖ್ಯನೆಂದು ಕರೆಯಲ್ಪಡುತ್ತಿದ್ದನು.



## ಸ್ಕಂಧಾವಾರನಿವೇಶವು.

ಸೈನ್ಯವು ಯುದ್ಧಕ್ಕೆ ಸನ್ನದ್ಧವಾಗಿ ಹೊರಡುವುದಕ್ಕೆ ಮೊದಲು ಒಬ್ಬ ನಾಯಕನೂ, ಜ್ಯೌತಿಷಿಕನೂ,ವರ್ಧಕಿಯೂ(ಬಡಗಿ)ಅನೇಕ ಕೂಲಿಯವರೂ ಹೊರಟುಮಾರ್ಗಗಳನ್ನೂ,ಅಲ್ಲಿಯಗ್ರಾಮಗಳನ್ನೂ,ಅರಣ್ಯಗಳನ್ನೂ,ಸೇತುವೆಗಳನ್ನೂ, ಕಾಲುದಾರಿಗಳನ್ನೂ, ಬಾವಿಗಳನ್ನೂ, ಕೆರೆಗಳನ್ನೂ ಪರೀಕ್ಷಿಸಿ, ಕೆಟ್ಟು ಹಾಳಾದುವುಗಳನ್ನು ಸರಿಗೊಳಿಸುತ್ತಿರುವರು. ಸೈನ್ಯವು ಬೀಡುಗೊಳ್ಳುವುದಕ್ಕೆ ತಕ್ಕ ಸ್ಥಲ

*Curtius 8 14

ಗಳನ್ನು ನಿರ್ಣಯಿಸಿ, ಇಳಿದುಕೊಳ್ಳುವಲ್ಲಿ ವಲಯಾಕಾರವಾಗಿಯಾಗಲಿ, ಚತುಷ್ಕೋಣಾಕೃತಿಯಾಗಿಯಾಗಲಿ, ಶಿಬಿರವನ್ನು ಏರ್ಪಡಿಸುವರು. ಶಿಬಿರಕ್ಕೆ ನಾಲ್ಕು ದ್ವಾರಗಳೂ ಆರು ದಾರಿಗಳೂ ಇರುವುವು. ಅದು ಒಂಭತ್ತು ಭಾಗಗಳಾಗಿ ವಿಭಾಗಿಸಲ್ಪಡುತ್ತಿದ್ದಿತು. ಶತ್ರುಗಳ ದೆಸೆಯಿಂದ ಅಪಾಯಬಾರದಂತೆ ಅದರ ಸುತ್ತಲೂ ಕಂದಕಗಳನ್ನೂ ಗೋಡೆಗಳನ್ನೂ ಪರಿಧಿಗಳನ್ನೂ ಬುರುಜುಗಳನ್ನೂ ನಿರ್ಮಿಸುತ್ತಿದ್ದರು. ರಾತ್ರಿಹಗಲೂ ಪಹರೆ ಕೊಡುವುದಕ್ಕೆ ಹದಿನೆಂಟು ಜತೆ ಸೈನಿಕರಿರುವರು. ಶಿಬಿರದಲ್ಲಿ ಅಪ್ರಮತ್ತತೆಯು ನೆಲೆಗೊಂಡಿರುವುದಕ್ಕಾಗಿ, ದ್ಯೂತ, ಮದ್ಯಪಾನ, ಔತಣ, ಕಲಹಗಳು ಪೂರ್ಣವಾಗಿ ನಿಷೇಧಿಸಲ್ಪಟ್ಟಿದ್ದುವು. ಶತ್ರುಗಳು ಮಾರುವೇಷದಿಂದ ಶಿಬಿರವನ್ನು ಸೇರಗೊಡದಂತೆ ಅಭಿಜ್ಞಾನಪತ್ರವನ್ನು ಹೊಂದದವರು ಒಳಗೆ ಬರಕೂಡದಾಗಿದ್ದಿತು.1



## ಸೈನ್ಯಗಳು ದಂಡೆತ್ತಿ ಹೊರಡುವ ರೀತಿ.

ಹುಲ್ಲೂ, ನೀರೂ, ಕಟ್ಟಿಗೆಯೂ ಸಮೃದ್ಧಿಯಾಗಿ ದೊರಕುವ ಮಾರ್ಗವೆಂದು ಮೊದಲು ಹೋಗಿದ್ದ ನಾಯಕನಿಂದ ಸೂಚಿಸಲ್ಪಟ್ಟ ವಾರ್ತೆಯನ್ನನುಸರಿಸಿ, ಆಯಾ ಗ್ರಾಮಗಳನ್ನು ತಿಳಿದುಕೊಂಡು ರಾಜನು ಯುದ್ಧಕ್ಕೆ ಹೋಗುವನು.

ಸೇನಾಮುಖದಲ್ಲಿ ನಾಯಕರೂ, ನಡುವೆ ರಾಜನೂ, ಅಂತಃಪುರಸ್ತ್ರೀಯರೂ, ಎಡಬಲಗಳಲ್ಲಿ ಅಶ್ವಾರೋಹಿ ಸೈನ್ಯವೂ, ಸುತ್ತಲೂ ಆನೆಗಳೂ ಮಿಕ್ಕ ಸೈನ್ಯವೂ ನಡೆಯುತ್ತಿರುವುದು. ತ್ವರೆಯಾಗಿ ನಡೆದಲ್ಲ ದಿನಕ್ಕೆ ಎರಡು ಯೋಜನಗಳ (ಸುಮಾರು ೧೩ ಮೈಲುಗಳು), ಮೆಲ್ಲನೆ ನಡೆದಲ್ಲಿ ಒಂದು ಯೋಜನದ ಪ್ರಯಾಣವನ್ನು ಸಾಗಿಸುತ್ತಿದ್ದರು. ಸೇನೆಯು ಬೀಡುಬಿಟ್ಟಲ್ಲಿ ಸೇನಾಧ್ಯಕ್ಷನ ಕುಟೀರವು ಸೇನೆಗೆ ಮುಂಭಾಗದಲ್ಲಿರುವುದು. ಸೈನ್ಯವು ನಡೆವಾಗ ಆತನು ಹಿಂದಿರುವನು.

ಯುದ್ಧಮಾಡುವ ಸಮಯಗಳಲ್ಲಿ ಭಟರು ಉತ್ಸಾಹದಿಂದ ಕೆಲಸಮಾಡುವುದಕ್ಕಾಗಿ ಶತ್ರುಸೈನ್ಯಗಳ ಭಟನನ್ನು ಕೊಂದವನಿಗೆ ೨೦ಹಣಗಳನ್ನೂ, ಕಾಲ್ಬಲಗಳ ನಾಯಕನನ್ನು ಕೊಂದವನಿಗೆ ೧೦೦ಹಣಗಳನ್ನೂ, ಅಶ್ವಾರೋಹಿಯನ್ನು ಕೊಂದವನಿಗೆ ೧,೦೦೦ ಹಣಗಳನ್ನೂ, ಆನೆಯನ್ನಾಗಲೀ ರಥವನ್ನಾಗಲೀ ನಾಶಮಾಡಿದವನಿಗೆ ೫,೦೦೦ ಹಣಗಳನ್ನೂ, ಯುವರಾಜನನ್ನಾಗಲಿ, ಸೇನಾಧ್ಯಕ್ಷನನ್ನಾಗಲಿ

1 ಚಾಣಕ್ಯನ ಅರ್ಥಶಾಸ್ತ್ರ ೧೦, ೧.

ಕೊಂದವನಿಗೆ ೫೦,೦೦೦ ಹಣಗಳನ್ನೂ, ಶತ್ರುರಾಜನನ್ನು ಕೊಂದವನಿಗೆ ಲಕ್ಷಹಣವನ್ನೂ ಬಹುಮಾನವಾಗಿ ಕೊಡುತ್ತಿದ್ದರು.



## ಧರ್ಮಯುದ್ಧವು.

ಹಿಂದೂಗಳ ಯುದ್ಧವಿಧಿಗಳು ಇತರ ದೇಶದವರ ಕ್ರಮಗಳಿಗಿಂತಲೂ ಹೆಚ್ಚಿನ ಕರುಣಾಯುತವಾದುವುಗಳು.

"ಆಯುಧಗಳನ್ನು ಬಿಸುಟವರನ್ನೂ, ಜುಟ್ಟುಗಳನ್ನು ಬಿರಿಯಹಾಕಿಕೊಂಡು ಅಥವಾ ಕೈಜೋಡಿಸಿ ದಯೆಬೇಡುವವರನ್ನೂ, ಶರಣಾಗತರಾದವರನ್ನೂ ಹಿಂಸಿಸಬಾರದೆಂಬ ಆರ್ಯರ ಶಾಸನವಿದೆ." 1

"ಭೀರುಗಳೊಡನೆಯೂ, ಮತ್ತರೊಡನೆಯೂ, ಉನ್ಮತ್ತರೊಡನೆಯೂ, ವೈಮರಿತವರೊಡನೆಯೂ, ಕವಚಭ್ರಷ್ಟರೊಡನೆಯೂ, ಸ್ತ್ರೀಶಿಶುವೃದ್ಧಬ್ರಾಹ್ಮಣರೊಡನೆಯೂ, ಯುದ್ಧಮಾಡಬಾರದು." ೨

"ಸಂಹೃತರಾದ ಯೋಧರ ಕುಟುಂಬವನ್ನು ಸಂರಕ್ಷಣೆಮಾಡಬೇಕು. ೩

ಮೆಗಾಸ್ತನೀಸು ಇಂತಹ ಯುದ್ಧಧರ್ಮಕಾರುಣ್ಯಕ್ಕೆ ಸಾಕ್ಷ್ಯವನ್ನು ಹೇಳುತ್ತಿದ್ದಾನೆ. "ಇತರ ದೇಶದವರಲ್ಲಿ, ಯುದ್ಧಕಾಲದಲ್ಲಿ ಭೂನಾಶನವನ್ನು ಸಾಮಾನ್ಯವಾಗಿ ಮಾಡುತ್ತಿರುವರು. ಅದಕ್ಕೆ ಬದಲಾಗಿ ಹಿಂದೂಗಳಲ್ಲಿ, ಬೇಸಾಯಗಾರರು-ಪವಿತ್ರರೂ, ಅಹಿಂಸನೀಯರೂ ಆದುದರಿಂದ-ಸಮೀಪದಲ್ಲಿಯೇ ಯುದ್ಧವು ಬಲವಾಗಿ ನಡೆಯುತ್ತಿದ್ದರೂ, ಭಯವಿಷ್ಟೂ ಇಲ್ಲದೆ ನೆಮ್ಮದಿಯಾಗಿರುವರು. ಏಕೆಂದರೆ, ಎರಡು ಕಡೆಯ ದಳದವರೂ ಯುದ್ಧಮಾಡುತ್ತ ಒಬ್ಬರನ್ನೊಬ್ಬರು ಕಡಿಯುತ್ತಿದ್ದರೂ, ಕರ್ಷಕರ ಗೊಡವೆಗೆ ಸ್ವಲ್ಪವಾದರೂ ಹೋಗುತ್ತಿರಲಿಲ್ಲ. ಮತ್ತು ಹಗೆಯವರ ಭೂಮಿಯನ್ನು ಬೆಂಕಿಯಿಟ್ಟು ಸುಟ್ಟುಬಿಡುವುದಾಗಲಿ, ಅಲ್ಲಿಯ ಫಲಮರಗಳನ್ನು ಕಡಿದುಹಾಕುವುದಾಗಲಿ ಅವರಲ್ಲಿ ವಾಡಿಕೆಯಾಗಿಲ್ಲ."

1. ಆಪಸ್ತಂಬ II. 5-10-11.
2. ಬೋಧಾಯನ I. 10-18-11
3. ವಸಿಷ್ಠ xIx. 20.



# ಎಂಟನೆಯ ಪ್ರಕರಣ.



## ರಾಜ್ಯಾಂಗ ವ್ಯವಸ್ಥೆ.

ಚಂದ್ರಗುಪ್ತನ ಕಾಲದಲ್ಲಿ ರಾಜನಿಗೆ ಸಲಹೆಗಳನ್ನು ಕೊಡುವುದಕ್ಕೆ ಮಂತ್ರಿಗಳ ಪರಿಷತ್ತು ಇದ್ದಿತು. ಅದರಲ್ಲಿ ೧೨ ಮಂದಿ ಇಲ್ಲವೆ ೧೬ ಮಂದಿ ಅಥವಾ ಆಯಾ ಸಂದರ್ಭಕ್ಕೆ ಬೇಕಾದಷ್ಟು ಮಂದಿ ಮಂತ್ರಿಗಳಿರುತ್ತಿದ್ದರು. ಎಲ್ಲ ವಿಷಯಗಳಲ್ಲಿಯೂ ರಾಜನು ಅವರ ಆಲೋಚನೆಯನ್ನು ಕೇಳುತ್ತಿದ್ದನು. ಕೇವಲ ರಹಸ್ಯವಾದ ವಿಷಯಗಳಲ್ಲಿ ಒಬ್ಬಿಬ್ಬರು ಮಂತ್ರಿಗಳು ಮಾತ್ರವೇ ಆಲೋಚನೆಯನ್ನು ತೀರಿಸುತ್ತಿದ್ದರು. ಆವಾಗಲಾದರೂ ಒಂದೊಂದುಸಾರಿ ರಾಜನು ಸ್ವತಂತ್ರಿಸಿ ಕೆಲಸ ಮಾಡುವುದೂ ಇದ್ದಿತು. ಆದರೆ ಸರ್ವಸಾಧಾರಣವಾಗಿ ರಾಜನು ಮಂತ್ರಿಗಳಲ್ಲಿ ಬಹು ಸಂಖ್ಯೆಯವರು ಹೇಗೆ ಹೇಳಿದರೆ ಹಾಗೆಯೇ ನಡೆಯುತ್ತಿದ್ದನು ಸಾಮ್ರಾಜ್ಯದೊಳಗಣ ದೂರದ ಪ್ರಾಂತಗಳ ಮೇಲೆ ಚಂದ್ರಗುಪ್ತನು ಪ್ರತಿನಿಧಿಗಳನ್ನು ನೇಮಿಸಿ ಅವರಿಂದ ರಾಜ್ಯಕಾರ್ಯಗಳನ್ನು ನಡೆಯಿಸುತ್ತಿದ್ದನು. ಈ ಪ್ರತಿನಿಧಿಗಳು ಸಾಮಾನ್ಯವಾಗಿ ರಾಜವಂಶದವರಾಗಿದ್ದಂತೆ ಕಾಣಬರುತ್ತಿದೆ. ರಾಜಧಾನಿಗೆ ಸಾವಿರಮೈಲು ದೂರದಲ್ಲಿದ್ದ "ಗಿರ್ನಾರ್" ಎಂಬ ಪಶ್ಚಿಮ ಪ್ರಾಂತದಲ್ಲಿ ಪುಷ್ಯಗುಪ್ತನೆಂಬ ಪ್ರತಿನಿಧಿಯು ಪರಿಪಾಲಿಸುತ್ತಿದಂತೆಯೂ, ಆತನು ಅಲ್ಲಿಯ ಕೃಷೀವಲ ಸೌಕರ್ಯಕ್ಕಾಗಿ ಒಂದು ನದಿಗೆ ಅಡ್ಡವಾಗಿ ಅಣೆಕಟ್ಟನ್ನು ಕಟ್ಟಿಸಿ ಅದರ ನೀರನ್ನು ಒಂದು ತಟಾಕಕ್ಕೆ ತಿರುಗಿಸಿ, ನಿರಂತರವಾದ ನೀರಿನ ವಸತಿಯನ್ನುಂಟುಮಾಡಿದನೆಂತಲೂ ತಿಳಿದುಬರುತ್ತಿದೆ.



## ರಾಜ್ಯ ವಿಭಾಗವು.

ಆಗಿನ ಕಾಲದಲ್ಲಿ ಸಾಧಾರಣವಾಗಿ ಐನೂರು ಒಕ್ಕಲಿಗರ ಕುಟುಂಬಗಳಿದ್ದುದು ಒಂದು ಹಳ್ಳಿ. ಇಂತಹ ಹಳ್ಳಿಗಳು ಒಂದಕ್ಕೊಂದು ಸುಮಾರು ಒಂದು ಹರದಾರಿಯ ದೂರದಲ್ಲಿರತಕ್ಕವುಗಳು. ಆದುದರಿಂದ ಆಪತ್ಸಮಯದಲ್ಲಿ ಒಂದೂರಿನವರು ಮತ್ತೊಂದೂರಿನವರಿಗೆ ಸಹಾಯಮಾಡಬಲ್ಲವರಾಗಿದ್ದರು. ಮೇರೆಗಳ ವಿಷಯದಲ್ಲಿ ವಿವಾದವು ಬಾರದಿರುವುದಕ್ಕಾಗಿ, ನದಿ, ಪರ್ವತ ಮೊದಲಾದ ಸ್ಥಾ

ಭಾವಿಕ ಚಿಹ್ನೆಗಳೇ ಮೇರೆಗಳ ಗುರುತುಗಳಾಗಿಡಲ್ಪಟ್ಟದ್ದುವು. ಹಳ್ಳಿಯ ಸುತ್ತಲೂ ಮಣ್ಣುಗೋಡೆಗಳನ್ನಿಡುತ್ತಿದ್ದರು. ಇಂತಹ ಹಳ್ಳಿಗಳು ಐದು ಮೊದಲುಗೊಂಡು ಹತ್ತರವರೆಗೂ ಒಬ್ಬ ಅಧಿಕಾರಿಯ ಕೈಕೆಳಗಿರುತ್ತಿದ್ದವು. ಈ ಅಧಿಕಾರಿಗೆ 'ಗೋಪ' ನೆಂದು ಹೆಸರು. ಈ ಗೋಪನೇ ಆ ಗ್ರಾಮಗಳಿಗೆ ಸಂಬಂಧಪಟ್ಟ ಲೆಕ್ಕಗಳನ್ನು ಬರೆಯುತ್ತಿರುವನು. ಗ್ರಾಮಗಳು, ಹೊಲಗಳು, ತೋಟಗಳು, ಮಾರ್ಗಗಳು, ಬಯಲುಗಳು, ದೇವಾಲಯಗಳು, ತೋಪುಗಳು, ತೀರ್ಥಗಳು ಮೊದಲಾದವುಗಳ ಗಡಿಯ ಗುರುತುಗಳನ್ನು ಈತನು ರಕ್ಷಿಸುತ್ತಿದ್ದನು.* ಗ್ರಾಮಸ್ಥರು ಮಾಡಿಕೊಳ್ಳುವ ದಾನಗಳು, ವಿಕ್ರಯಗಳು, ವಿಚಾರಣೆಗಳು ಈತನ ಮೂಲವಾಗಿ ಜರುಗುತ್ತಿದ್ದುವು ಗ್ರಾಮದಲ್ಲಿಯ ಪ್ರತಿಮನೆಯ ಜನಗಳ ಲೆಕ್ಕವೂ ಸೇವಕರ ಲೆಕ್ಕವೂ, ದಾಸರ ಲೆಕ್ಕವೂ, ಪಶುಪಕ್ಷ್ಯಾದಿಗಳ ಲೆಕ್ಕವೂ ಈತನಿಂದ ಬರೆಯಲ್ಪಡುತ್ತಿದ್ದಿತು. ಅದೇ ಲೆಕ್ಕದಲ್ಲಿ ಒಂದೊಂದು ಮನೆಯವರು ಸರಕಾರದವರಿಗೆ ಸಲ್ಲಿಸುವ ತೆರಿಗೆಯ ಮೊತ್ತವೂ ಗೊತ್ತಾಗುತ್ತಿದ್ದಿತು. ಗ್ರಾಮಸ್ಥರ ವೃತ್ತಿಗಳನ್ನು ಹಿಡಿದು ಅವರವರು ಗಳಿಸುವ ಮೊತ್ತಗಳನ್ನು ಸುಮಾರಾಗಿ ನಿರ್ಣಯಿಸಿ ಲೆಕ್ಕ ಬರೆವುದೂ ಆತನ ಕೆಲಸಗಳಲ್ಲಿ ಒಂದು. × ಈ ಕರ್ತವ್ಯಗಳ ದೆಸೆಯಿಂದ ಇವನು ಅಂದಿನ ಶಾನುಭೋಗನೆಂದು ಬೇರೆಯಾಗಿ ಹೇಳಬೇಕಾದುದಿಲ್ಲ.

ಎಂಟುನೂರು ಗ್ರಾಮಗಳ ಮೇಲಣ ಅಧಿಕಾರಿಗೆ "ಸ್ಥಾನಿಕ" ನೆಂದು ಹೆಸರು. ಈ ೮೦೦ ಗ್ರಾಮಗಳ ರಕ್ಷಣೆಗಾಗಿ "ಸ್ಥಾನೀಯ" ವೆಂಬ ದುರ್ಗವಿರುತ್ತಿತ್ತು. ಈಗಿನ ಜಮೀನುದಾರಿಗಳಲ್ಲಿಯ ಠಾಣೇದಾರರು ಎಂಬ ಶಬ್ದಕ್ಕೆ ಈ ಸ್ಥಾನಿಕನೆಂಬ ಪದವು ತಂದೆಯಾಗಿರಬಹುದು. ಗೋಪನು ಗ್ರಾಮದ ಮೇಲೆ ಹೇಗೋ ಹಾಗೆ ಸ್ಥಾನಿಕನು ಮಂಡಲದ ಮೇಲಣ ಅಧಿಕಾರಿಯು. ಈ ಅಧಿಕಾರಿಗಳೆಲ್ಲರಮೇಲೆ ಇರುವವನು 'ಸಮಾಹರ್ತ' ನೆಂದು ಕರೆಯಲ್ಪಡುತ್ತಿದ್ದನು. ರಾಷ್ಟ್ರವನ್ನು ಮಂಡಲಗಳಾಗಿ ವಿಭಾಗಿಸುವುದೂ, ಗ್ರಾಮಗಳನ್ನು ತರಗತಿಗಳಾಗಿ ನಿಯಮಿಸುವುದೂ, ಗ್ರಾಮಾಧಿಕಾರಿಗಳ ಮತ್ತು ಸ್ಥಾನಿಕರ ಕೆಲಸಗಳನ್ನು ಪರಿಶೀಲಿಸುವುದೂ ಈತನ ಕರ್ತವ್ಯವು. ಈ ಸಮಾಹರ್ತನಲ್ಲದೆ ರಾಜ್ಯಾಂಗಶಾಖೆಗಳೊಂದೊಂದಕ್ಕೂ ಒಬ್ಬೊಬ್ಬ ಅಧ್ಯಕ್ಷನಿರುವನು. ಅಧ್ಯಕ್ಷರೆಲ್ಲರೂ ಮಂತ್ರಿಗಳೊಳಗಣವರೇ ಆಗಿರುವರು. ಇವರು ರಾಜನೊಡನೆ ಕೂಡಿ ಮೇಲೆ ಹೇಳಿದಂತೆ ರಾಜ್ಯಭಾರವನ್ನು ವಹಿಸುವರು.

---

* ಈಗ ಈ ಕೆಲಸಗಳೆಲ್ಲವನ್ನೂ ಶಾನುಭೋಗರೂ, Land Record Inspector ರೂ, ತಹಶೀಲ್ದಾರರೂ ಮಾಡುತ್ತಿರುವರು.

× ಚಾಣಕ್ಯನ ಅರ್ಥಶಾಸ್ತ್ರ.

ಗ್ರಾಮಗಳು ಉತ್ತಮ ಮಧ್ಯಮಾಧಮಗಳೆಂದು ಮೂರು ವಿಧ. ಈ ವಿಭಾಗವಲ್ಲದೆ ಈ ಕೆಳಗಣ ವಿಧವಾಗಿ ಬೇರೆ ತರಗತಿಗಳು ಏರ್ಪಟ್ಟು ಇದ್ದುವು.

೧. ಇನಾಮು ಗ್ರಾಮಗಳು.
೨. ಸೈನಿಕ ಗ್ರಾಮಗಳು.
೩. ಧನಧಾನ್ಯ ವಸ್ತುಗಳನ್ನು ಸಲ್ಲಿಸುವ ಗ್ರಾಮ.
೪. ಹಸುಗಳನ್ನೂ ಸೇವಕರನ್ನೂ ಒದಗಿಸಿ ಕೊಡುವ ಗ್ರಾಮಗಳು.
೫. ಹಾಲು ಮೊಸರುಗಳನ್ನೂ ಕಾಯಿಪಲ್ಲೆಯಗಳನ್ನೂ ಕೊಡುವ ಗ್ರಾಮಗಳು.



## ರಾಜ್ಯಾದಾಯಮಾರ್ಗಗಳು.

ಈಗಿನರೀತಿಯೇ ಚಂದ್ರಗುಪ್ತನ ಕಾಲದಲ್ಲಿಯೂ, ರಾಜನಿಗೆ ನಮ್ಮ ದೇಶದಲ್ಲಿ ಹುಟ್ಟುವಳಿಗೆ ಮುಖ್ಯಾಧಾರವು ನೆಲತೆರಿಗೆಯೇ ಆಗಿದ್ದಿತು. "ಕೃಷಿಯಲ್ಲಿರುವ ಭೂಮಿಯಲ್ಲಿ ವಿಶೇಷ ಭಾಗಕ್ಕೆ ನೀರಿನ ವಸತಿಯಿರುವುದು. ಸಂವತ್ಸರಕ್ಕೆ ಎರಡು ಬೆಳೆಗಳು ಬೆಳೆಯುತ್ತಿರುವುವು............ನದಿಗಳ ಮೇಲೆ ಕೆಲವರು ಅಧಿಕಾರಿಗಳಿರುವರು. ಅವರು ಈಜಿಪ್ಟು ದೇಶದಲ್ಲಿಯಂತೆಯೇ ಭೂಮಿಗಳನ್ನು ಅಳೆದು ಒಕ್ಕಲಿಗರಿಗೆ ಅನ್ಯಾಯವಾಗದಂತೆ ದೊಡ್ಡ ಕಾಲಿವೆಗಳಿಂದ ಚಿಕ್ಕ ಕಾಲಿವೆಗಳಿಗೆ ನೀರು ಬಿಡುವ ದ್ವಾರಗಳನ್ನು ತಕ್ಕ ವಿಧದಿಂದ ಮುಚ್ಚಿಸುತ್ತಲೂ ತೆರೆಯಿಸುತ್ತಲೂ ಇರುವರು." ೧. ಸಾಧ್ಯವಾದಮಟ್ಟಿಗೆ ಇಂತಹ ನೀರವಸತಿಗಳನ್ನುಂಟುಮಾಡಿ ಚಂದ್ರಗುಪ್ತನು ಭೂಮಿಯಲ್ಲಿ ಕರ್ಷಕರು ಮಾಡಬೇಕಾದ ಕಷ್ಟವನ್ನು ಅನುಸರಿಸಿ ತೆರಿಗೆಯನ್ನು ಎತ್ತುತ್ತಿದ್ದನು. 'ಹಸ್ತಪ್ರವರ್ತಿಮ' ಭೂಮಿಗಳಲ್ಲಿ ಎಂದರೆ ಕೈಕಷ್ಟದಿಂದ ನೀರು ಹರಿಯಿಸತಕ್ಕ ಭೂಮಿಗಳಲ್ಲಿ 'ಉದಕಭಾಗವು' ೨. ಬೆಳೆಯಲ್ಲಿ ಐದನೆಯ ಒಂದಂಶವಾಗಿ ನಿರ್ಣಯಿಸಲ್ಪಟ್ಟಿದ್ದಿತು. 'ಸ್ಕಂಧಪ್ರವರ್ತಿಮ' ೩. ಭೂಮಿಗಳಲ್ಲಿ, ಎಂದರೆ ಎತ್ತುಗಳ ಸಹಾಯದಿಂದ ನೀರು ಹರಿವಂತೆ ಮಾಡುವ ಭೂಮಿಗಳಲ್ಲಿ ನಾಲ್ಕನೆಯ ಒಂದಂಶವೂ, 'ಸ್ರೋತಯಂತ್ರ ಪ್ರವ

---

೧. ಮೆಗಾಸ್ತನೀಸ್. ೨. ನೀರತೀರುವೆಯೆಂದು ಅರ್ಥವು.

೩ 'ಸ್ಕಂಧಪ್ರವರ್ತಿಮ' ಎಂಬುದಕ್ಕೆ 'ಭುಜದಿಂದ ಹೊತ್ತುಕೊಳ್ಳುವುದು' ಎಂದು ಕೆಲವರು ಅರ್ಥವನ್ನು ಬರೆದಿರುವರು. ಆ ಅರ್ಥವನ್ನಂಗೀಕರಿಸಿದಲ್ಲಿ ಹಸ್ತಪ್ರವರ್ತಿಮಕ್ಕೂ ಇದಕ್ಕೂ ಭೇದತೋರುವುದಿಲ್ಲ. ಭೇದವಿಲ್ಲದಲ್ಲಿ ತೀರ್ವೆಯು ಹೇಗೆ ಭೇದವಾಗುವುದೋ ಗೊತ್ತಾಗುವುದಿಲ್ಲ. ಸ್ಕಂಧ ಎಂಬ ಶಬ್ದವು ಜತೆಯ ಎತ್ತುಗಳಿಗೆ ಕೂಡ ಬರುವುದರಿಂದ ಅವುಗಳ ಸಹಾಯದಿಂದ ನೀರು ಹರಿವಂತೆ ಮಾಡುವ ಭೂಮಿಗಳೆಂಬುದು ಯುಕ್ತಿಯುಕ್ತವಾಗಿದೆ.

ತ್ತಿವು' ಎಂದರೆ ವಾಯು ಯಂತ್ರಗಳ ೪ ಮೂಲಕವೂ ಇತರ ಯಂತ್ರಗಳ ಮೂಲಕವೂ ಸಾಗುವ ಭೂಮಿಗಳಲ್ಲಿ ಮೂರನೆಯ ಒಂದಂಶವೂ; ನದಿಗಳು ಸರಸ್ಸುಗಳು, ಕೆರೆಗಳು ಭಾವಿಗಳು ಮೊದಲಾದುವುಗಳಿಂದ ಬೇಸಾಯ ನಡೆವ ಭೂಮಿಗಳಲ್ಲಿ ಮೂರು ಇಲ್ಲವೆ ನಾಲ್ಕನೆಯ ಒಂದಂಶವು ನಿರ್ಣಯಿಸಲ್ಪಡು ತ್ತಿದ್ದಿತು.

ಅರ್ಥಶಾಸ್ತ್ರದ ಒಂದೆಡೆಯಲ್ಲಿ "ಸಾಗುವಮಾಡದೆ ಬೀಳುಬಿಟ್ಟ ಭೂಮಿಗ ಳನ್ನು (ಅರಸನು) ಬೆಳೆಯಲ್ಲಿ ಅರ್ಧಭಾಗಕ್ಕೆ ಪೈರುಮಾಡುವವರಿಗೆ ಕೊಡಬ ಹುದು. ಸ್ವಂತ ಕೃಷಿಯನ್ನು ಮಾಡತಕ್ಕ ರೈತರಿಗೆ ನಾಲ್ಕು ಅಥವಾ ಐದನೆಯ ಒಂದಂಶಕ್ಕೆ ಕೊಟ್ಟುಬಿಡಬಹುದು. ಅಥವಾ ಅವರು ಅನವಸರವಾದ ನಷ್ಟವನ್ನು ಹೊಂದದೆ ಕೊಡಲು ಸಾಧ್ಯವಾದಷ್ಟನ್ನು ಕೊಟ್ಟರೂ ಕೊಡಬಹುದು." ಎಂದು ಬರೆಯಲ್ಪಟ್ಟಿರುವುದರಿಂದ ಚಂದ್ರಗುಪ್ತನ ಕಾಲದಲ್ಲಿ ಕರ್ಷಕನು ಕೊಡಲಾಗದ ತೆರಿಗೆಯನ್ನು ರಾಜನು ಕೇಳುತ್ತಿರಲಿಲ್ಲವೆಂಬುದು ಸ್ಪಷ್ಟವಾಗುವುದು. ಸ್ವಂತ ವಾಗಿ ಕೆರೆಗಳನ್ನು ತೋಡಿಸಿಕೊಂಡಲ್ಲಿ, ಅಂತಹ ಪ್ರಜೆಗಳು ಆ ಕೆರೆಗಳ ಕೆಳಗಣ ಸಾಗುವಳಿಯ ಮೇಲೆ ಐದು ವರ್ಷಗಳ ಕಾಲವೂ, ಶಿಥಿಲವಾದ ಕೆರೆಗಳನ್ನು ಸರಿ ಗೊಳಿಸಿಕೊಳ್ಳುವವರು ನಾಲ್ಕುವರ್ಷಗಳ ಕಾಲವೂ, ಕೆರೆಗಳ ವಿಸ್ತೀರ್ಣವನ್ನು ಹೆಚ್ಚಿಸಿಕೊಂಡು ಹೆಚ್ಚಿನ ಭೂಭಾಗವನ್ನು ಕೃಷಿಗೆ ತರಲು ಯೋಚಿಸಿದವರು ಆ ಭಾಗದ ಮೇಲೆ ಮೂರು ವರ್ಷಗಳವರೆಗೂ, ಕುಷ್ಕಿ ಬೆಳೆಗಳನ್ನು ಬೆಳೆಯಿಸುವ ಉದ್ದೇಶದಿಂದ ಕ್ಷೇತ್ರಗಳನ್ನು ಸಿದ್ಧಪಡಿಸಿಕೊಳ್ಳುವವರು ಎರಡು ವರ್ಷಗಳ ಪರ್ಯಂ ತವೂ, ತೆರಿಗೆಯನ್ನು ಸಲ್ಲಿಸಲು ಅಗತ್ಯವಿಲ್ಲವೆಂದು ಮಾಡಲ್ಪಟ್ಟ ನಿಯಮಗಳು, ತೆರಿಗೆಗಳನ್ನೆತ್ತುವುದರಲ್ಲಿ ರಾಜನಿಗೆ ಇದ್ದ ದೂರದೃಷ್ಟಿಯನ್ನು ಸಹಸ್ರಮುಖದಿಂದ ಘೋಷಿಸುತ್ತಿವೆ.

ಇದುವರೆಗೂ ಬರೆಯಲ್ಪಟ್ಟ ತೆರಿಗೆಗಳಿಗೆ "ಉದಕಭಾಗ" ಗಳೆಂದು ಹೆಸರು. ಎಂದರೆ, ಇವು ಹಳ್ಳಭೂಮಿಗಳ ಮೇಲಣ ತೆರಿಗೆಗಳೆಂದು ಅರ್ಥವು. ತಿಟ್ಟುಭೂ ಮಿಗಳ ಮೇಲೆ ವಿಧಿಸಲ್ಪಡುತ್ತಿದ್ದ ತೆರಿಗೆಗಳನ್ನು ಕುರಿತು ಕಂಡುಕೊಳ್ಳುವುದಕ್ಕೆ ಆಧಾರವಾವುದೂ ಕಾಣಬರುವುದಿಲ್ಲ.

ರಾಜನಿಗೆ ಸ್ವಂತಮಾನ್ಯಗಳು ಅನೇಕವಿದ್ದುವು. ಅವುಗಳನ್ನು ಆತನು "ಸೀತಾಧ್ಯಕ್ಷ" ನೆಂಬ ಅಧಿಕಾರಿಯ ಮೂಲಕ ಸಾಗುಮಾಡಿಸುತ್ತಿದ್ದನು. ಈ

---

೪. ವಾತಪ್ರವರ್ತಿಮನಂದಿನಿ ವಸ್ಥಾಯನ ತಟಾಕ ಕೇದಾರಾರಾಮ ಷಣ್ಡವಾಪಾನಾಂ ಸಸ್ಯಪಣ ಭಾಗೋತ್ತರಿಕಮನ್ಯೇ ವಾಯಥೋಪಕಾರಂ ದದ್ಯುಃ (ಅರ್ಥಶಾಸ್ತ್ರ, ಮೂರನೆಯ ಭಾಗವು

ಅಧಿಕಾರಿಯು "ಕೃಷಿತಂತ್ರಗುಲ್ಮವೃಕ್ಷಾಯುರ್ವೇದಜ್ಞ" ನಾಗಿದ್ದನು. ಆತನು ರಾಜನ ಕ್ಷೇತ್ರಗಳಿಗೆ ಬೇಕಾದ ಬೀಜಗಳನ್ನು ಸಂಪಾದಿಸಿ, ತತ್ತಚ್ಛಾಸ್ತ್ರಗಳಲ್ಲಿ ಪ್ರವೀಣರಾದ ಕೆಳಗಣ ಅಧಿಕಾರಿಗಳ ಸಹಾಯವನ್ನು ಹೊಂದಿ, ದಾಸರನ್ನೂ ಕೂಲಿಯವರನ್ನೂ ಬಂದಿಗಳನ್ನೂ ವಿನಿಯೋಗಿಸಿಕೊಂಡು, ಅರಸನ ಕೃಷಿಯನ್ನು ಸಾಗಿಸುವನು. ಅವುಗಳಿಗೆ ಬೇಕಾದ ಉಪಕರಣಗಳನ್ನು ಸಿದ್ಧಮಾಡಿಕೊಳ್ಳುವುದೂ ಅವನ ಕೆಲಸವೇ. ಆತನು ಸೂರ್ಯಚಂದ್ರಾದಿ ಗ್ರಹಗಳ ಮತ್ತು ನಕ್ಷತ್ರಗಳ ಗತಿಗಳನ್ನು ಗಮನಿಸಿ ಕಾಲವೈಪರೀತ್ಯಗಳನ್ನು ತಿಳಿಯಪಡಿಸುತ್ತಿದ್ದಂತೆಯೂ ಮೇಘಗಳನ್ನೂ ಪರಿಶೀಲಿಸಿ ಮಳೆಯ ನ್ಯೂನಾಧಿಕ್ಯಗಳನ್ನು ತಿಳುಹಿಸುತ್ತ ಇದ್ದಂತೆಯೂ, ವರ್ಷಮಾಪಕಯಂತ್ರಗಳ ಸಹಾಯದಿಂದ 'ದ್ರೋಣ' ವೆಂಬ ಪರಿಮಾಣವನ್ನುಪಯೋಗಿಸಿ, ವರ್ಷಪಾತದ ಲೆಕ್ಕವಿಡುತಿದ್ದಂತೆಯೂ ಕಂಡುಬರುತ್ತಿದೆ. ಗೊಬ್ಬರಗಳನ್ನು ಉಪಯೋಗಿಸುವ ಪದ್ಧತಿಗಳನ್ನು ಕೂಡ ಆತನೇ ನಿಯಮಿಸುತ್ತಿದ್ದಂತೆ ತಿಳಿಯಬರುತ್ತಿದೆ. ಈ ವಿಧವಾಗಿ ಕಾಲವೈಪರೀತ್ಯಗಳನ್ನು ಕಂಡುಹಿಡಿದು, ವರ್ಷಗಳ ನ್ಯೂನಾಧಿಕ್ಯವನ್ನು ತಿಳಿಸಿ, ವರ್ಷಪಾತವನ್ನು ಲೆಕ್ಕಿಸಿ ಗೊಬ್ಬರಗಳ ಸಾರಾಸಾರಗಳನ್ನು ನಿರ್ಣಯಿಸಿ ಸೀತಾಧ್ಯಕ್ಷನು ತನ್ನ ಶಾಖೆಯೊಳಗಣ ಇತರ ಅಧಿಕಾರಿಗಳೊಡನೆ ಒಕ್ಕಲಿಗರಿಗೆ ಸಹಾಯಮಾಡುತ್ತಿದ್ದನು.1

ಚಂದ್ರಗುಪ್ತನ ಕಾಲದಲ್ಲಿ ಗೋವುಗಳ ಅಧ್ಯಕ್ಷನೆಂಬ ಅಧಿಕಾರಿಯೊಬ್ಬನಿದ್ದನು. ಆತನು ಅರಸನ ಆಕಳು ಮೊದಲಾದುವುಗಳಿಗೆಲ್ಲ ಪಾಲಕನು. ಆ ಹಸುಗಳಿಗೆ ಬೇಕಾದ ಉಪಚಾರಗಳನ್ನು ಮಾಡಿಸಿ ಅವುಗಳ ಮೂಲಕ ಬರುವ ಆದಾಯವನ್ನು ಆತನು ಅರಸನ ಬೊಕ್ಕಸಕ್ಕೆ ಸೇರಿಸುತ್ತಿದ್ದನು. ಸಾವಿರಾರು ಹಸುಗಳು ಅರಸನಿಗಿದ್ದುದರಿಂದ ಈ ಆದಾಯವು ಸ್ವಲ್ಪವೆಂದು ಹೇಳಲು ಸಾಧ್ಯವಲ್ಲ.

ರಾಜನಿಗೆ ವರಮಾನವನ್ನು ಕೊಡುವುದರಲ್ಲಿ, ಸಾಗುವಳಿಯ ಎರಡನೆಯದು ದೇಶದೊಳಗಣ ವ್ಯಾಪಾರವಾಗಿದ್ದಿತು.

ಚಂದ್ರಗುಪ್ತನ ಕಾಲದಲ್ಲಿ ವ್ಯಾಪಾರವೆಲ್ಲವೂ ಕೋಟೆಯ ಬಳಿ ಕಟ್ಟಲ್ಪಟ್ಟ ಸುಂಕದಕಟ್ಟೆಯ ಹತ್ತಿರವೇ ನಡೆಯಬೇಕಾಗಿದ್ದಿತು. ಇತರ ಸ್ಥಳಗಳಲ್ಲಿ ವ್ಯಾಪಾರವನ್ನು ಜರುಗಿಸುವುದು ನಿಷಿದ್ಧವಾಗಿದ್ದಿತು. ವ್ಯಾಪಾರಕ್ಕಾಗಿ ಬೇಸಾಯಗಾರರೂ ವ್ಯಾಪಾರಸ್ಥರೂ ತಂದ ವಸ್ತುಸಮುದಾಯವು ಸುಂಕದಕಟ್ಟೆಯ ಹತ್ತಿರವೇ ಮಾರಲ್ಪಟ್ಟ ತರುವಾಯ, ಮಾರಿ ಬಂದ ಹಣದ ಮೊತ್ತವನ್ನು ಹಿಡಿದು, ಸುಂಕಗಳನ್ನು ವಸೂಲುಮಾಡುತ್ತಿದ್ದರು, ಕೃಷೀವಲರಾಗಲಿ, ಕೈಗಾರಿಕೆಯ ಕೆಲಸದ

1 ಈಗ Agricultural Departmentನವರು ಈ ಕೆಲಸವನ್ನೇ ಮಾಡುತ್ತಿರುವರು.

ವರಾಗಲಿ ವಸ್ತುಸಮುದಾಯಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಾಯಿಸಿಕೊಳ್ಳುವಲ್ಲಿ ಸುಂಕದಕಟ್ಟೆಯ ದಾರಿಯಿಂದಲೇ ಬರಬೇಕಾಗಿದ್ದರೂ, ಅವರು ಸುಂಕವನ್ನು ಕೊಡುವ ಅಗತ್ಯವಿರಲಿಲ್ಲ. ವಿವಾಹಾರ್ಥವೂ, ರಾಜನಿಗೆ ಅರ್ಪಿಸುವುದಕ್ಕೂ, ಅರಸನ ಬೊಕ್ಕಸಕ್ಕೆ ಸೇರಿಸುವುದಕ್ಕೂ, ಮತೋಪಯೋಗಕ್ಕೂ, ಪ್ರಸವಿಸುವ ಸ್ತ್ರೀಯರಿಗೂ, ಪ್ರಯೋಜನಗಳಾಗಿಯೂ ಕೊಂಡುಹೋಗತಕ್ಕ ಸಾಮಗ್ರಿಗಳನ್ನು ಸುಂಕವಿಲ್ಲದೆ ತೆಗೆದುಕೊಂಡುಹೋಗಬಹುದಾಗಿದ್ದಿತು. ಸುಂಕದ ದರವು ನೂರಕ್ಕೆ ಇಪ್ಪತ್ತೈದರಿಂದ ಐದರ ವರೆಗೂ ಇದ್ದಿತು. ಸುಂಕದ ನಿಬಂಧನೆಗಳನ್ನು ಮೀರುವವರಿಗೆ ಸಂದರ್ಭವರಿತು ೩೦೦೦ ಪಣಗಳ (ಎಂದರೆ ಈಗಿನ ೨,೦೦೦ ರೂಪಾಯಿ) ವರೆಗೂ ಅಪರಾಧವು ವಿಧಿಸಲ್ಪಡುತ್ತಿತ್ತು. ಈ ವಿಧವಾಗಿಯೂ ಅರಸನ ಬೊಕ್ಕಸಕ್ಕೆ ತುಂಬ ದ್ರವ್ಯವು ಸೇರುತ್ತಿದ್ದಿತು.

ವಿದೇಶಗಳಿಂದ ಬರುವ ಸಾಮಗ್ರಿಗಳ ಮೇಲೆ ವ್ಯಾಪಾರದ ಸುಂಕವಲ್ಲದೆ ಇನ್ನೊಂದು ವಿಧವಾದ ಸುಂಕವು ಸಲ್ಲುತ್ತಿದ್ದಿತು. ಒಟ್ಟಿನಮೇಲೆ, ಹೊರಗಿಂದ ಬರುವ ವಸ್ತುಗಳ ಮೇಲೆ ಬಲವಾದ ತೆರಿಗೆಯು ವಿಧಿಸಲ್ಪಡುತ್ತಿದ್ದಿತು. (೧) 'ಶುಲ್ಕ' ವೆಂಬ ವ್ಯಾಪಾರದ ಸುಂಕವೂ (೨) 'ವರ್ತನಿ' ಎಂಬ ಮಾರ್ಗದಸುಂಕವೂ[1] (೩) 'ಗುಲ್ಮದೇಯ' ವೆಂಬ ಸೈನಿಕಸುಂಕವೂ (೪) 'ಭಾಗ' ವೆಂಬ ಹೊರಗಿನಿಂದ ಬರುವ ವಸ್ತುಗಳ ಮೇಲಣ ಸುಂಕವೂ ಸರ್ವಸಾಧಾರಣವಾಗಿ ಮೇಲ್ಕಂಡ ವಸ್ತುಗಳಿಗೆ ತಪ್ಪಿದುದಲ್ಲ.

ಈ ರೀತಿ ಸಾರ್ವಭೌಮನಿಗೆ ಆಮದುರಫ್ತುಗಳಿಂದ ಸುಂಕದ ರೂಪವಾಗಿ ಆದಾಯವಿರುತ್ತಿದ್ದಿತು.

ಆ ಕಾಲದಲ್ಲಿ ಅಳತೆಯ ಪಾತ್ರಗಳನ್ನೂ ಪ್ರಭುತ್ವದವರೇ ಸಿದ್ಧಗೊಳಿಸಿ ಮಾರುತ್ತಿದ್ದರು. ವ್ಯಾಪಾರಿಗಳು ಅವುಗಳನ್ನು ಕೊಂಡುಕೊಳ್ಳುವುದಷ್ಟೇ ಅಲ್ಲದೆ ಪ್ರತಿದಿನವೂ ಅವುಗಳ ಪರಿಮಾಣಗಳು ಸರಿಯಾಗಿವೆಯೆಂದು ನಿರ್ಣಯಮುದ್ರೆಯನ್ನು ಹಾಕಿಸುವುದಕ್ಕೆ ಪ್ರಭುತ್ವದವರಿಗೆ ಸ್ವಲ್ಪ ಹಣವನ್ನು ಕೊಡುತ್ತಿದ್ದರು. ವ್ಯಾಪಾರಸ್ಥರು ಪ್ರಜೆಗಳನ್ನು ಎಷ್ಟುಮಾತ್ರ ಮೋಸಗೊಳಿಸಲು ಯತ್ನಿಸಿದರೂ, ಅಪರಾಧಿಗಳೆಂದೆಣಿಸಲ್ಪಟ್ಟು ದಂಡಗಳಿಂದ ಶಿಕ್ಷಿಸಲ್ಪಡುತ್ತಿದ್ದರು.

ಈಗಿನಂತೆಯೇ ಚಂದ್ರಗುಪ್ತನ ಕಾಲದಲ್ಲಿ ಕೂಡ ಉಪ್ಪು ಮಾಡಿ ಮಾರುವುದು ಪ್ರಭುತ್ವದವರ ಸ್ವಾತಂತ್ರ್ಯವಾಗಿದ್ದಿತು. ಅವರು ದೇಶದಲ್ಲಿ ತಾವಾಗಿಯೇ

---

1 ಇದು ಮತ್ತೊಂದು ರಾಜ್ಯದಿಂದ ತನ್ನ ರಾಜ್ಯಕ್ಕೆ ಬರುವ ವಸ್ತುಗಳ ಮೇಲೆ ರಾಜನು ವಿಧಿಸುವ ಸುಂಕವು.

ಉಪ್ಪನ್ನು ಮಾಡುತ್ತಿದ್ದರು. ಒಂದೊಂದು ಬಾರಿ ಆ ಸ್ವಾತಂತ್ರ್ಯವನ್ನು ಕೌಲು ದಾರರಿಗೆ ಗುತ್ತಿಗೆ ಕೊಡುವುದೂ ಇದ್ದಿತು. ತಮ್ಮ ದೇಶದಲ್ಲಿ ಉತ್ಪತ್ತಿಯಾಗು ತ್ತಿದ್ದ ಉಪ್ಪೇ ಅಲ್ಲದೆ ಬೇರೆ ದೇಶಗಳಿಂದಲೂ ಉಪ್ಪು ಬರುತ್ತಿದ್ದಿತು. ಅದರ ವ್ಯಾಪಾರವೂ ಪ್ರಭುತ್ವದವರಿಗೇ ಸೇರಿದ್ದಿತು.

ಮದ್ಯಪಾಯಿಗಳು ಈಗಳಿನ ಕಾಲದಂತೆಯೇ ಅಗಳೂ ಪ್ರಭುತ್ವದವರಿಗೆ ದ್ರವ್ಯವನ್ನುಂಟುಮಾಡಿಕೊಡುತ್ತಿದ್ದರು. ಆದರೆ ಆಗ ಕುಡಿಯುವುದಕ್ಕಾಗಿ ಸರ್ವ ಸ್ವವನ್ನೂ ಹೋಗಲಾಡಿಸಿಕೊಳ್ಳುವ ಸಂದರ್ಭವುಂಟಾಗದಂತೆ ಕೆಲವು ನಿಬಂಧನೆ ಗಳು ಏರ್ಪಟ್ಟು ಇದ್ದುವು. ನಿರ್ಣಯಿಸಲ್ಪಟ್ಟ ಪರಿಮಿತಿಗಿಂತ ಹೆಚ್ಚಾಗಿ ಯಾರಿಗೂ ಮದ್ಯವನ್ನು ಮಾರುತ್ತಲಿರಲಿಲ್ಲ. ಬೆಲೆಗೂ ಮಿತಿಯಿದ್ದಿತು. ಕುಡಿದು ಮಯ್ಮ ರೆತುಬಿದ್ದವರ ಮಯ್ಯ ಮೇಲಿನ ಸ್ವತ್ತುಗಳನ್ನು ಕಾಪಾಡುವುದಕ್ಕಾಗಿ ಉಚಿತ ವಾದ ವಿಧಿಗಳು ಏರ್ಪಟ್ಟಿದ್ದುವು. ವಿದೇಶದ ಸಾರಾಯಿಗಳ ಮೇಲೆ ಸಾಧಾರಣ ಸುಂಕಗಳಲ್ಲದೆ, ೧೦೦ಕ್ಕೆ ೫ರಂತೆ ತೆರಿಗೆಗಳು ವಿಧಿಸಲ್ಪಡುತ್ತಿದ್ದುವು. ಸುರಾಮಂದಿ ರಗಳಿಗೆ ಸಂಬಂಧಿಸಿದ ಶಾಸನಗಳಲ್ಲಿ, ಆ ಮಂದಿರಗಳು ಸೌಕರ್ಯಯುಕ್ತವಾಗಿದ್ದು ವಿಶಾಲವಾದ ಕೋಣೆಗಳಿಂದ ಕೂಡಿ, ಒಂದೊಂದು ಕೋಣೆಯಲ್ಲಿ ಬೇಕಾದಷ್ಟು ಮಂಚಗಳೂ, ಕುರ್ಚಿಗಳೂ ಇರುವಂತೆಯೂ,ಆಯಾ ಋತುಗಳಿಗೆ ಅವಶ್ಯವಾದ ಅನುಕೂಲ್ಯಗಳೆಲ್ಲವನ್ನುಂಟುಮಾಡಿಡುವಂತೆಯೂ, ಯಾವಾಗಲೂ ಪುಷ್ಪಹಾರಗ ಳಿಂದಲೂ, ಅಗರುಚಂದನಾದಿ ಪರಿಮಳದ್ರವ್ಯಗಳಿಂದಲೂ ತುಂಬಿರುವಂತೆಯೂ ಅಲಂಕರಿಸಿರಬೇಕೆಂದು ವಿಧಿಯಿದ್ದಿತು. ಇದನ್ನು ಹಿಡಿದು, ಚರಿತ್ರಕಾರರು ಕೆಲ ವರು ಆ ಕಾಲದಲ್ಲಿ ಕುಡಿಕತನವು ಹೆಚ್ಚಾಗಿದ್ದಂತೆ ಊಹಿಸುತ್ತಿರುವರು. ಆದರೂ ಮೇಲೆ ಹೇಳಿದ ನಿಬಂಧನೆಗಳನ್ನು ಜಾಗರೂಕತೆಯಿಂದ ನೋಡಿದಲ್ಲಿ ಈ ಅಲಂಕಾ ರಾದಿಗಳು ಕುಡಿಯಹೋಗುವ ಸ್ವಲ್ಪ ಸಂಖ್ಯೆಯ ಜನಗಳ ಆರೋಗ್ಯಕ್ಕಾಗಿಯೂ, ಪರಿಸರ ಪ್ರದೇಶದವರಿಗೆ ಜುಗುಪ್ಸಾಭಾರವು ಆಪಾದಿಸದಂತೆಯೂ ವಿಧಿಸಲ್ಪಟ್ಟಿ ದ್ದಿತೆಂದು ತೋರದಿರದು. ಅಳತೆಯ ಪಾತ್ರಗಳೂ ತೂಕದ ಯಂತ್ರಗಳೂ ಪ್ರಭು ತ್ವದವರಿಂದಲೇ ಮಾರಲ್ಪಡುತ್ತಿದ್ದುವೆಂದು ಈ ಮೊದಲೇ ಹೇಳಿರುವೆವು. ಅದನ್ನು ಕುರಿತು "ಇಂಡಿಯನ್ ಆಂಟಿಕ್ವೇರಿ" ಯ ಸಂಪಾದಕರು ಆ ಕಾಲದಲ್ಲಿ ನಾಣ್ಯ ಗಳು ಬಹು ಸ್ವಲ್ಪವಾಗಿ ಉಪಯೋಗಿಸಲ್ಪಡುತ್ತಿದ್ದುವೆಂತಲೂ ವ್ಯಾಪಾರವೆಲ್ಲವೂ ವಸ್ತುಗ್ರಹಣ ಪ್ರತಿಗ್ರಹಣದಿಂದಲೇ ಜರುಗುತ್ತಿದ್ದಿತೆಂದೂ ಬರೆದಿರುವರು. ಆದುದರಿಂದ ಆ ಕಾಲದಲ್ಲಿ ನಾಣ್ಯಗಳಿಂದ ರಾಜನಿಗೆ ಹೆಚ್ಚಿನ ಲಾಭವುಂಟಾಗುತ್ತಿ ದ್ದಿತೆಂದು ಹೇಳಲಾಗುವುದಿಲ್ಲ. ಆದರೂ ಆ ಕಾಲದ ನಾಣ್ಯಗಳನ್ನೂ ಅವುಗಳಲ್ಲಿನ

ಲೋಹವಿಶೇಷಗನ್ನೂ ಈಗಿನ ನಾಣ್ಯಗಳೊಡನಿರುವ ಸಾಮ್ಯವನ್ನೂ ವಾಚಕರು ಗ್ರಹಿಸುವಂತೆ ಈ ಕೆಳಗಣ ವಿವರಣ ಪಟ್ಟಿಕೆಯನ್ನು ಕೊಡುವೆವು.

| | ನಾಣ್ಯದ ಹೆಸರು | ಅದರೊಳಗಣ ವಿಶೇಷ ಲೋಹವು. | ಬೆಲೆ (ಗುರುಗುಂಜಿಯಲ್ಲಿ) |
|---|---|---|---|
| 1 | ಪಣವು | ೧/೧೬ ತಾಮ್ರ; ೧/೧೬ ಸೀಸ | = ೮೦ ಗುರುಗುಂಜಿಗಳು = ೮/೧೨೨ ತೊಲೆ = ಸುಮಾರಾಗಿ ಈಗಿನ ರೂಪಾಯಿಲ್ಲಿ ೨/೩ ರಷ್ಟು |
| 2 | ಅರ್ಧಪಣ | ,, | = ೪೦ ಗುರುಗಂಜಿಗಳು |
| 3 | ಪಾದ | ,, | = ೨೦ ,, |
| 4 | ಅಷ್ಟಭಾಗ | ,, | = ೧೦ ,, |
| 1 | ಮಾಷ | ೧/೪ ಇತರ ಲೋಹ | = ೫ ,, |
| 2 | ಅರ್ಧಮಾಷ | ,, | = ೨ ೧/೨ ,, |
| 3 | ಕಾಕಣಿ | ,, | = ೧ ೧/೪ ,, |
| 4 | ಅರ್ಧಕಾಕಣಿ | ,, | = ೫/೮ ,, |

/ಮೇಲಿನ ವಿವರಣಪಟ್ಟಿಕೆಯಲ್ಲಿ ಕಂಡುಬಂದುವಲ್ಲದೆ, ಅರ್ಥಶಾಸ್ತ್ರದಲ್ಲಿ ಚಾಣಕ್ಯನು ಮೂರು ಬಂಗಾರದ ನಾಣ್ಯಗಳ ಹೆಸರುಗಳನ್ನೂ ಸೂಚಿಸಿರುವನು. ೫ ಗುರುಗುಂಜಿ ಭಾರವುಳ್ಳುದು ಮಾಷವೆಂತಲೂ, ೧೬ ಮಾಷಗಳ ಭಾರವುಳ್ಳುದು ಸುವರ್ಣ ಇಲ್ಲವೆ ಕರ್ಷವೆಂತಲೂ, ನಾಲ್ಕು ಕರ್ಷಗಳ ತೂಕವುಳ್ಳುದು ಒಂದು ಪಲವೆಂತಲೂ ಹೇಳಿರುವನು. ಈ ಪರಿಮಾಣಪರಂಪರೆಯು ತೂಕಕ್ಕೆ ಮಾತ್ರವಾಗಿಯೇ ಇರಬಹುದೇ? ತೂಕಮಾತ್ರಕ್ಕೆ ಸುವರ್ಣದ ಪಡಿಗಳು ಬೇಕಾಗಿವೆಯೇ? ಆದುದರಿಂದ ಚಂದ್ರಗುಪ್ತನ ಕಾಲದಲ್ಲಿ ಇವು ವಾಡಿಕೆಯಲ್ಲಿದ್ದ ಬಂಗಾರದ ನಾಣ್ಯಗಳೆಂದು ಹೇಳುವುದೇ ಯುಕ್ತಿಯುಕ್ತವಾಗಿದೆ. ಆಗಿನ ಕಾಲದಲ್ಲಿ

ಹಿಂದೂದೇಶವು ಚಿನ್ನಕ್ಕೆ ಹೆಸರುಗೊಂಡಿದ್ದಿತು. ಮೆಗಾಸ್ತನೀಸು ಭರತಖಂಡ ದಲ್ಲಿ ಚಿನ್ನ ಅಗೆವುದರ ವಿಷಯವಾಗಿ ವಿಚಿತ್ರವಾದ ಈ ಕೆಳಗಣ ಕಥೆಯೊಂದನ್ನು ಬರೆದಿರುವನು.

ಪೂರ್ವಸೀಮಾಂತದಲ್ಲಿ ೨೦-೮೦ ಮೈಲುಗಳ ಸುತ್ತಳತೆಯುಳ್ಳ ಉಚ್ಚ ಭೂಪ್ರದೇಶದಲ್ಲಿ ಭಾರತೀಯರಲ್ಲಿ ಒಂದು ಜಾತಿಯವರಾದ "ದರದರು" ಎಂಬವರು ವಾಸವಾಗಿರುವರು. ಅಲ್ಲಿ ಭೂಗರ್ಭದಲ್ಲಿ ಬಂಗಾರದ ಗನಿಗಳಿವೆ. ಆದುದರಿಂದಲೇ ಬಂಗಾರವನ್ನು ಅಗೆವ ಇರುವೆಗಳು ಅಲ್ಲಿ ಇವೆ. ಪರಿಮಾಣದಲ್ಲಿ ಆವು ಅಡವಿಯ ನರಿಗಳನ್ನು ಹೋಲುತ್ತವೆ. ಅವುಗಳ ತ್ವರಿತ ಗಮನವು ವಿಭ್ರಮೆಯನ್ನು ಹುಟ್ಟಿಸುವುದು. ಆವು ಬೇಟೆಯಾಡಿ ಜೀವನ ಮಾಡುವುವು. ಚಿನ್ನವನ್ನು ಅಗೆವುದಕ್ಕೆ ಅವುಗಳಿಗೆ ಶಿಶಿರಋತುವು ಅನುಕೂಲವು. ಅವು ಬಂಗಾರದ ಗಣಿಗಳಿಂದ ಆ ಲೋಹವನ್ನು ಅಗೆದು ಅದರೊಡನೆ ಕೂಡಿದ ಮಣ್ಣನ್ನು ಅಡವಿಯ ಇಲಿಗಳಂತೆ ಗಣಿಯ ಬಾಗಿಲಲ್ಲಿ ರಾಶಿ ಹಾಕುವುವು. ಹಾಗೆ ಬಿದ್ದ ಬಂಗಾರದ ಪುಡಿಯನ್ನು ಕರಗಿಸುವುದೇ ಕೆಲಸವು. ಸುತ್ತುಮುತ್ತಲಿನ ಜನರು ಹೇರೆತ್ತುಗಳನ್ನು ತಂದು ಕಳ್ಳತನದಿಂದ ಆ ಮಣ್ಣನ್ನು ಹೊತ್ತುಕೊಂಡು ಹೋಗುವರು. ಆವರು ಗೊತ್ತಾಗುವಂತೆ ಬಂದರೆ ಅಲ್ಲಿಯ ಅದ್ಭುತವಾಗ ಇರುವೆಗಳು ಅವರಿದಿರಿಗೆ ಹೋಗಿ ಓಡಗೊಡದೆ ಅವರನ್ನೂ ಅವರ ಎತ್ತುಗಳನ್ನೂ ಕೊಂದುಹಾಕುವುವು. ಆದುದರಿಂದ ಅವರು ಅಲ್ಲಲ್ಲಿ ವಿವಿಧವಾದ ಮಾಂಸಖಂಡಗಳನ್ನು ಎರಚಿ ಆ ಇರುವೆಗಳು ಅವುಗಳನ್ನು ತಿನ್ನುವುದರಲ್ಲಿ ಮೆಯ್ಮರೆತಿದ್ದಾಗ ಬಂಗಾರದ ಪುಡಿಯನ್ನು ಅಪಹರಿಸುವರು. ಆ ಪುಡಿಯನ್ನು ಕರಗಿಸುವ ಪದ್ಧತಿಯು ಅವರಿಗೆ ತಿಳಿಯದುದರಿಂದ ಅವರು ಅದನ್ನು ಬೇರೆಯವರಿಗೆ ಮಾರುತ್ತಿರುವರು. *

ಮೇಲಣ ಸಂಗತಿಗಳು ಅತ್ಯದ್ಭುತವಾಗಿ ತೋರಿದರೂ ಅದರಲ್ಲಿ ಸತ್ಯಾಂಶವಿಲ್ಲದೇ ಇಲ್ಲ. ಅಗೆಯುತ್ತಿದ್ದುದು ಇರುವೆಗಳಲ್ಲ. ಆದರೆ ತಿಬೇಟ್ ದೇಶದ ಖನನಕ್ರಿಯಾದಕ್ಷರು ಆ ಕೆಲಸವನ್ನು ಮಾಡುತ್ತಿದ್ದರು. ಅವರ ಉಪಕರಣಾದಿಗಳಿಂದಲೂ, ಅವರ ಪದ್ಧತಿಗಳಿಂದಲೂ, ಅಭ್ಯಾಸಗಳಿಂದಲೂ ಮೇಲಣ ಕಥೆಯುಂಟಾಗಿರಬಹುದೆಂದು ನಿರ್ಣಯಿಸಲ್ಪಟ್ಟಿದೆ.

ಯಾವುದು ಹೇಗಾದರೂ, ಮೊದಲು ಹಿಂದೂದೇಶದಲ್ಲಿ ಇರುವೆಗಳು ಚಿನ್ನದ ಹುತ್ತಗಳನ್ನು ಕಟ್ಟುತ್ತಿದ್ದುವೆಂದರೂ, ಹೊರಗಣ ದೇಶದವರು ನಂಬಿಯ್ಯೋ

* Macrindle Megasthenes Page 94. ಈ ಕಥೆಯನ್ನು ಮೆಗಾಸ್ತನೀಸನಿಗೂ ಮೊದಲು ಅನೇಕರು ಹೇಳಿಕೊಂಡಿರುವರು.

ನಂಬುತ್ತಿದ್ದರು. ಅಂಥ ಕಾಲದಲ್ಲಿ ಸ್ವರ್ಣದ ನಾಣ್ಯಗಳಿದ್ದುವೆಂದು ಹೇಳುವುದಕ್ಕೆ ಬೇರೆ ಯುಕ್ತಿಗಳು ಬೇಕಾಗಿವೆಯೇ? ಒಂದುವೇಳೆ ಚಿನ್ನದ ತೂಕದ ಪಡಿಗಳನ್ನೂ ಉಪಯೋಗಿಸುತ್ತಲಿದ್ದರೋ ಏನೋ! ×

ನಾಣ್ಯಗಳ ಕಥೆಯನ್ನು ಇಷ್ಟಕ್ಕೆ ಸಾಕುಮಾಡೋಣ. ಇದುವರೆಗೆ ಹೇಳಿದ ಮಾರ್ಗಗಳೇ ಅಲ್ಲದೆ ರಾಜನಿಗೆ ಆದಾಯವನ್ನುಂಟುಮಾಡುವ ಮಾರ್ಗಗಳು ಇನ್ನೂ ಅನೇಕವಿದ್ದುವು. ಅವುಗಳ ವಿಸ್ತಾರವಾದ ವಿವರಣವು ಅಗತ್ಯವಿಲ್ಲ.

ಸಾಮಂತರಾಜರು ತಂದ ಕಪ್ಪಗಳೂ, ಗ್ರಾಮರಕ್ಷಕ ಸಂಘಗಳು ಬರಮಾಡಿಕೊಳ್ಳುವ ಅಪರಾಧ ದ್ರವ್ಯವೂ ಬಂದಿಗಳನ್ನು ಬಿಡಿಸಿಕೊಳ್ಳುವುದಕ್ಕೆ ಕೊಡಲ್ಪಡುವ ಧನವೂ, ಅಭಿಜ್ಞಾನಪತ್ರಗಳ ಬೆಲೆಯೂ ಅಗತ್ಯವಿದ್ದಾಗ ದೇವಾಲಯಗಳಲ್ಲಿಯ ದ್ರವ್ಯವೂ ಹಡಗುಗಳ ಮೇಲಣ ತೆರಿಗೆಯೂ, ದಾರಿಗಳ ಸುಂಕವೂ, ಗಣಿಗಳ ತೀರುವೆಯೂ, ಅಡವಿಯ ದ್ರವ್ಯಗಳ ಮೇಲಣ ಸುಂಕವೂ, ದಂಡಗಳೂ ರಾಜನ ಬೊಕ್ಕಸಕ್ಕೆ ಸೇರುತ್ತಿದ್ದುವು.



## ಖಾನೇಸುಮಾರಿಯ ಲೆಕ್ಕಗಳು.

ನಾಗರಕನಿಗೂ ಗೋಪನಿಗೂ ನಿಯಮಿಸಲ್ಪಟ್ಟ ಕರ್ತವ್ಯಗಳಲ್ಲಿ ಖಾನೇಸುಮಾರಿಯ ಲೆಕ್ಕವು ಎಂದಿನದಂದಿಗೇ ಬರೆಯತಕ್ಕುದೂ ಒಂದಾಗಿದ್ದಿತು. ತಮ್ಮ ಗ್ರಾಮದೊಳಗಣ ಪ್ರತಿವ್ಯಕ್ತಿಯ ಜಾತಿ, ಹೆಸರು, ಮನೆಯ ಹೆಸರು, ವೃತ್ತಿ, ಹುಟ್ಟುವಳಿ, ವ್ಯಯ, ದನಕರುಗಳು ಮೊದಲಾದುವನ್ನು ಇವರು ಬರೆದಿಟ್ಟುಕೊಳ್ಳುತ್ತಿದ್ದರು. ಹೊರಗಣವರಾರಾದರೂ ಬಂದಾಗ ಅವರನ್ನು ಕುರಿತು ತಿಳಿದುಕೊಂಡು ಬರೆದಿಡಬೇಕೆಂತಲೂ, ಅಂತಹವರು ಅಥವಾ ಮತ್ತಾರಾದರೂ ತಪ್ಪು ಸಂಗತಿಗಳನ್ನು ನುಡಿದಲ್ಲಿ ಅವರು ಶಿಕ್ಷೆಗೆ ಪಾತ್ರರಾಗುವರೆಂತಲೂ ಇದ್ದಿತು. ಇದಕ್ಕಿಂತ ಹೆಚ್ಚಿನ ಖಾನೇಸುಮಾರಿಯ ಲೆಕ್ಕವೇತಕ್ಕೆ ಬೇಕಾಗಿದೆ?



## ದಾರಿಗಳು—ವಾಹನಗಳು.

ಚಂದ್ರಗುಪ್ತನ ರಾಜ್ಯವು ಈಗಿನ ಭರತಖಂಡಕ್ಕಿಂತಲೂ ವಿಸ್ತೀರ್ಣದಲ್ಲಿ ಹೆಚ್ಚಾಗಿದ್ದಿತೆಂದು ಈ ಮೊದಲೇ ಬರೆದಿರುವೆವು. ಇಂತಹ ರಾಜ್ಯದಲ್ಲಿ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಪ್ರಯಾಣಾದಿಗಳನ್ನು ಮಾಡುವುದಕ್ಕೆ ಸದುಪಾಯಗಳು ಅನೇಕವಿದ್ದುವು.

× Indian Antiquary, Volume 4, Page 225.

ನದೀನದಗಳಿಗೂ, ಕಾಲಿವೆಗಳಿಗೂ, "ಕುಲ್ಯಾಮಾರ್ಗಗಳೆಂತಲೂ; ಸಾಮ್ರಾಜ್ಯ ದೊಳಗಣ ರೇವುಗಳೊಂದೊಂದಕ್ಕೂ ಇರುವ ತೀರದ ಮಾರ್ಗಗಳಿಗೆ 'ಕೂಲಪಥ' ಗಳೆಂತಲೂ, ವಿದೇಶಗಳೊಡನೆ ಸಂಬಂಧವನ್ನುಂಟುಮಾಡುವ ಯಾವತ್ತು ಸಮು ದ್ರಮಾರ್ಗಗಳಿಗೆ "ಸಂಯಾನಪಥ" ಗಳೆಂತಲೂ, ಹೆಸರಿವೆ. ಈ ನೀರದಾರಿಗ ಳಿಗೆ ಅರ್ಹವಾದ ನಾವೆಗಳು ಅನೇಕ ವಿಧಗಳಾಗಿದ್ದುವು. ಸಂಯಾತ್ಯನಾವೆಗಳೂ, ಪ್ರವಹಣಗಳೂ ಸಮುದ್ರದಮೇಲೆ ಪ್ರಯಾಣಿಕರಿಗೆ ಉಪಯುಕ್ತವಾದುವುಗಳು. ಶಂಖಮುಕ್ತಾಗ್ರಾಹಿನಾವೆಗಳು ಅನ್ವರ್ಥನಾಮಗಳೆನಿಸಿ ಸಾಗರದಲ್ಲಿ ಮುತ್ತುಗಳ ನ್ನಾರಿಸಿ ತರುವುದಕ್ಕೆ ಹೋಗುವುವು. ಮಹಾನಾವೆಗಳು ಮಹಾನದಿಗಳಲ್ಲಿ ಉಪ ಯೋಗವಾಗುವುವು. ಕ್ಷುದ್ರನಾವೆಗಳು, ತೆಪ್ಪಗಳು, ಬುಟ್ಟಿಗಳು (ಹರಗೋಲು) ಪ್ಲವಗಳು ಮೊದಲಾದ ನೀರನ್ನು ದಾಟಿಸುವ ಸಾಧನಗಳಿಗೆ ಲೆಕ್ಕವೇ ಇದ್ದಿಲ್ಲ.

ನಾವೆಗಳೊಳಗಣ ಅಧಿಕಾರಿಗಳೂ, ಸೇವಕರೂ, ಅವರವರ ಕರ್ತವ್ಯಗಳೂ ವಿಸ್ತಾರವಾಗಿ ವರ್ಣಿತವಾಗಿವೆ. ಅದುದರಿಂದ ನೌಕಾಯಾನವು ಆಗಿನ ಕಾಲ ದಲ್ಲಿ ಪೂರ್ಣಸ್ಥಿತಿಯಲ್ಲಿದ್ದಿತೆಂದು ಹೇಳಬಹುದು.



## ವ್ಯಾಪಾರ—ಕೈಗಾರಿಕೆಯ ಕೆಲಸಗಳು.

ಇಂತಹ ಮಾರ್ಗಗಳಿದ್ದುದರಿಂದ ಚಂದ್ರಗುಪ್ತನ ಕಾಲದಲ್ಲಿ ವ್ಯಾಪಾರವು ಅತಿ ವಿಸ್ತಾರವಾಗಿ ಜರುಗುತ್ತಿದ್ದಿತು. ಮಧುರೆ೧, ಅಪರಾಂತ೨, ಕಳಿಂಗ, ಕಾಶಿ, ವಂಗ, ವತ್ಸ೩, ಮಹಿಷಳ ದೇಶಗಳು ಸುಂದರತಮವಾದ ಹತ್ತಿಯ ಬಟ್ಟೆ ಗಳನ್ನು ಕಳುಹಿಸುತ್ತಿದ್ದುವು. ಮುತ್ತುಗಳು ಪಾರಶೀಕದಿಂದಲೂ ಬರ್ಬರದಿಂದಲೂ ಸುವಾಸನೆಯ ದ್ರವಗಳು ಕಾಮರೂಪ (ಈಗಿನ ಆಸ್ಸಾಮ್) ದಿಂದಲೂ ಸಿಂಹಳ ದಿಂದಲೂ; ತೊಗಲು ಹಿಮಾಲಯ ಪರ್ವತಗಳ ಮೇಲಣ ಮ್ಲೇಚ್ಛ ಗ್ರಾಮಗ ಳಿಂದಲೂ; 'ಕಾಲೇಯಕ' ವೆಂಬ ಗಂಧದಚಕ್ಕೆಯು ಸ್ವರ್ಣಭೂಮಿಯೆನ್ನಲ್ಪಡುವ ಬರ್ಮಾದೇಶದಿಂದಲೂ; ಪಟ್ಟೆಯ ವಸ್ತ್ರಗಳು ಚೀನದೇಶದಿಂದಲೂ; ಅಗರು ಸಮುದ್ರದ ಆಚೆಯಿಂದಲೂ ಬರುತ್ತಿದ್ದಿತು. ಕ್ರಿ. ಪೂ. ಆರನೆಯ ಶತಾಬ್ದದಲ್ಲಿ ಭರತವರ್ಷದ ಪಶ್ಚಿಮತೀರದ ವ್ಯಾಪಾರಸ್ಥರು ಬೇಬಿಲೋನ್ ರಾಜ್ಯದೊಡನೆ

---

೧. ದಕ್ಷಿಣ ಮಧುರೆ.
೨. ಕೊಂಕಣ.
೩. ಕೌಶಾಂಬಿ.
೪. ಮಾಹಿಷ್ಮತಿ—ಕೆಲವರ ಮತದಂತೆ ಮೈಸೂರು.

ಅರ್ಥಶಾಸ್ತ್ರ ಸಂ. ೨, ಅ, ೧೧,

ವ್ಯಾಪಾರಾದಿಗಳನ್ನು ನಡೆಯಿಸುತ್ತಿದ್ದರೆಂಬುದಕ್ಕೆ ನಿದರ್ಶನಗಳಿವೆಯೆಂಬುದಾಗಿ ಬ್ಯೂಲರೆಂಬ ಪಂಡಿತರು ಬರೆಯುತ್ತಿರುವರು. ಇದೂ ಚಂದ್ರಗುಪ್ತ ಚಕ್ರವರ್ತಿಯ ಕಾಲಕ್ಕೆ ಸಂಬಂಧಿಸಿದುದರಿಂದ, ಮೇಲಣ ಮಾತುಗಳನ್ನೂ ಗ್ರಹಿಸಿದಲ್ಲಿ, ಅಂದಿನ ವ್ಯಾಪಾರಪರಿಮಿತಿಯು ಅಪಾರವೆಂಬುದು ವ್ಯಕ್ತವಾಗುತ್ತಿದೆ.

ಸರ್ವಸಾಧಾರಣವಾಗಿ ವ್ಯಾಪಾರದ ಹಿಂದೆಯೇ ಕೈಗಾರಿಕೆಗಳೂ ಅಭಿವೃದ್ಧಿಯನ್ನು ಹೊಂದುತ್ತಿವೆ. ಅವುಗಳ ಅವಸ್ಥೆಯನ್ನು ಕುರಿತು ವಿಶೇಷವಾಗಿ ಬರವುದಕ್ಕೆ ವಿಪುಲವಾದ ಆಧಾರಗಳಿಲ್ಲ. ಸೂತ್ರಾಧ್ಯಕ್ಷನೆಂಬ ಅಧಿಕಾರಿಯು ಕಾಣಬರುವುದರಿಂದಲೂ, ಆತನು ನೇಯಿಗೆಯ ಕೆಲಸವನ್ನು ನೋಡಿಕೊಳ್ಳುವುದಕ್ಕೆ ಮಾತ್ರವೇ ನಿಯೋಗಿಸಲ್ಪಟ್ಟಿದ್ದುದರಿಂದಲೂ, ಆಗಿನ ಕಾಲಗಳಲ್ಲಿ ಕೈಗಾರಿಕೆಗಳು ವಿಸ್ತಾರವಾಗಿ ನಡೆಯುತ್ತಿದ್ದುವೆಂದು ಹೇಳಬಹುದು. ಕುಂಬಾರರ ಕೆಲಸವೇ ಮೊದಲಾದ ಸಾಧಾರಣ ಕೆಲಸಗಳನ್ನು ಕುರಿತು ಇಲ್ಲಿ ಹೇಳಲು ಅಗತ್ಯವಿಲ್ಲ. ಅರ್ಥಶಾಸ್ತ್ರದ ಒಂದಾನೊಂದು ಸಂದರ್ಭದಲ್ಲಿ ಬರೆದಿರುವುದನ್ನು ನೋಡಿದಲ್ಲಿ ಆ ಕಾಲದಲ್ಲಿ ಗಾಜಿನ ಕೆಲಸವು ನಡೆಯುತ್ತಿದ್ದಂತೆಯೂ, ಅದು ನಾಣ್ಯದ ಕೆಲಸಗಳಲ್ಲೊಂದಾಗಿ ಎಣಿಸಲ್ಪಡುತ್ತಿದ್ದಂತೆಯೂ ಕಂಡುಬರುವುದು.೧



## ನ್ಯಾಯವಿಚಾರಣೆ.

"ಹಿಂದುಗಳು ಹಣವನ್ನು ಬಡ್ಡಿಗೆ ಕೊಡುವುದಿಲ್ಲ, ಸಾಲತೆಗೆದುಕೊಳ್ಳುವುದನ್ನೂ ತಿಳಿಯರು. ಒಬ್ಬರಿಗೆ ಕೇಡನ್ನುಂಟುಮಾಡುವುದಾಗಲೀ, ಮತ್ತೊಬ್ಬರಿಂದ ಕೇಡನ್ನು ಹೊಂದುವುದಾಗಲೀ ಪ್ರಾಚೀನಾಚಾರಕ್ಕೆ ವಿರುದ್ಧವು. ಆದುದರಿಂದ ಸಮ್ಮತಿಪತ್ರಗಳಾಗಲೀ ದಸ್ತಾವೇಜುಗಳಾಗಲೀ ದೊರೆಯವು. ಒಂದು ವೇಳೆ ಸಾಲಕೊಟ್ಟಿದ್ದರೂ, ಧನವನ್ನು ನಿಕ್ಷೇಪವಾಗಿಟ್ಟಿದ್ದರೂ, ಅದನ್ನು ಋಣಗ್ರಸ್ತನಿಂದಾಗಲೀ, ಧನಗೋಪ್ತನಿಂದಾಗಲೀ, ತಿರುಗಿ ಬರಮಾಡುವುದಕ್ಕೆ ಶಾಸನ ಸಹಾಯವಿಲ್ಲ. ಆದುದರಿಂದ ಋಣದಾತನಾಗಲಿ, ಧನನಿಕ್ಷೇಪಿಯಾಗಲಿ, ನಂಬಿದವನು ಮೋಸಗಾರನಾದರೆ ಅದಕ್ಕೆ ತನ್ನನ್ನು ತಾನೇ ದೂರಿಕೊಳ್ಳುವುದಕ್ಕಿಂತ ಇತರ ಉಪಾಯವನ್ನು ಕಾಣನು"—ಎಂದು ಮೆಗಾಸ್ತನೀಸು ಬರೆದಿರುವನು. ಈ ವಾಕ್ಯಗಳು ಸ್ಥೂಲದೃಷ್ಟಿಯಿಂದ ಬರೆಯಲ್ಪಟ್ಟುವೆಂತಲೂ, ಅವುಗಳಿಂದ ಆಗಳಿನ ಅಮಾಯಿಕ ಸ್ಥಿತಿಯು ನಿರೂಪಿಸಲ್ಪಡುತ್ತಿದೆಯೆಂತಲೂ ಹೇಳಬೇಕಾಗಿದೆ. ಮೇಲೆ ಹೇಳಿದ ವ್ಯಾಪಾರಾದಿಗಳ ಪರಿಮಾಣವನ್ನು ಹಿಡಿದು ನೋಡಿದರೂ, ಚಾಣ

೧. Indian Antiquary Vol. 34, Page 116.

ಕ್ಯನ ಅರ್ಥಶಾಸ್ತ್ರವನ್ನು ಹಿಡಿದು ನೋಡಿದರೂ, ಆಕಾಲದಲ್ಲಿ ನ್ಯಾಯಸ್ಥಾನ ಪರಂಪರೆಯೂ, ತದುಚಿತ ನಿಬಂಧನೆಗಳೂ ಇದ್ದುವೆಂದು ವ್ಯಕ್ತವಾಗುತ್ತಿದೆ.

ಪ್ರತಿ ಗ್ರಾಮಿಕನೂ, ಎಂದರೆ ಗ್ರಾಮಾಧಿಕಾರಿಯೂ, ಗ್ರಾಮವೃದ್ಧರೊಡನೆ, ಎಂದರೆ ಗ್ರಾಮಪಂಚಾಯತರೊಡನೆ ಕೂಡಿಕೊಂಡು ಪ್ರಥಮನ್ಯಾಯಸ್ಥಾನವಾಗಿದ್ದು ವ್ಯವಹಾರಗಳನ್ನು ನಿರ್ಣಯಿಸುತ್ತಿದ್ದನು. ಕೆಲವು ಸಂಗತಿಗಳಲ್ಲಿ ಈ ನ್ಯಾಯಸ್ಥಾನದವರಿಗೆ ಸಂಪೂರ್ಣಾಧಿಕಾರವಿದ್ದಿತು. ಕಳ್ಳರನ್ನೂ ದುರ್ಮಾರ್ಗರನ್ನೂ ಗ್ರಾಮಿಕನು ತನ್ನ ಗ್ರಾಮದಿಂದ ಗಡಿಪಾರುಮಾಡುವುದಕ್ಕೂ ಸ್ವತಂತ್ರನಾಗಿದ್ದನು. ಈತನದು ಮೊದಲನೆಯ ನ್ಯಾಯಸ್ಥಾನವು. ರಾಜನದು ಉತ್ತಮನ್ಯಾಯಸ್ಥಾನವು. ಈ ಎರಡಕ್ಕೂ ಮಧ್ಯಸ್ಥಾನವನ್ನು ವಹಿಸಿ, ದೇಶದೊಳಗಣ ನ್ಯಾಯವಿಚಾರಗಳನ್ನು ನಡೆಯಿಸುವ ನ್ಯಾಯಸ್ಥಾನಗಳು ಅನೇಕವಿದ್ದುವು. ಧರ್ಮಸ್ಥೀಯಗಳೆಂತಲೂ, ಕಂಟಕಶೋಧನೆಗಳೆಂತಲೂ, ಅವು ಎರಡು ತೆರನಾಗಿ ವಿಭಾಗಿಸಲ್ಪಟ್ಟಿದ್ದುವು. ಈ ವಿಭಾಗಕ್ಕೆ ಕಾರಣವು ವ್ಯಾಯೋಗವಿಶೇಷವೇ.

ಧರ್ಮಸ್ಥೀಯಗಳು ಆರು ಮಂದಿ ನ್ಯಾಯಾಧಿಪತಿಗಳ ಸಂಘಗಳಾಗಿದ್ದುವು. ಅದರಲ್ಲಿ ಮೂವರು ಶಾಸ್ತ್ರಾಧ್ಯಯನಪಾರೀಣರಾಗಿ ಧರ್ಮಸ್ಥರೆಂದು ಕರೆಯಲ್ಪಡುತ್ತಿದ್ದರು. ಮಿಕ್ಕ ಮೂವರೂ ಅರಸನ ಅಮಾತ್ಯವರ್ಗಕ್ಕೆಸೇರಿದವರು. ಇವರು ಲೋಕಾನುಭವವುಳ್ಳವರಾದುದರಿಂದ ಶಾಸ್ತ್ರವೇತ್ತರಿಗೆ ಸಹಕಾರಿಗಳಾಗಿ ನ್ಯಾಯವನ್ನು ತೀರಿಸುತ್ತಿದ್ದರು. ಧರ್ಮಸ್ಥೀಯ ನ್ಯಾಯಸಂಘಗಳು ವಿಚಾರಿಸುತ್ತಿದ್ದ ವಿಷಯಗಳು ಸರ್ವಸಾಧಾರಣದವುಗಳು. ಪ್ರಜೆಗಳಲ್ಲಿ ಒಬ್ಬೊಬ್ಬರಿಗೆ ಇರುವ ಸಾಮಾನ್ಯಸಂಬಂಧವಿಷಯಕ ವಿವಾದಗಳನ್ನೂ, ಸ್ವಲ್ಪ ಪ್ರಜಾಸಂಘಗಳಲ್ಲಿ ಒಂದೊಂದಕ್ಕೆ ಇರುವ ಸಾಮಾನ್ಯಸಂಬಂಧ ವಿಷಯಕ ವಿವಾದಗಳನ್ನೂ ಈ ಧರ್ಮಸ್ಥೀಯಗಳು ತೀರಿಸುತ್ತಿದ್ದುವು.[1] ಇವಕ್ಕೆ ಸ್ವಲ್ಪಮಾತ್ರದ ದಂಡವನ್ನು ವಿಧಿಸುವುದಕ್ಕಿಂತ ಹೆಚ್ಚಿನ ಅಧಿಕಾರವಿರಲಿಲ್ಲ.

---

1 ವ್ಯವಹಾರಸ್ಥಾಪನಗಳು, ಸಮಯವಿಚ್ಛೇದಾದಿಗಳು, ಸ್ವಾಮ್ಯಾಧಿಕಾರಭೃತ್ಯಾಧಿಕಾರಗಳು, ದಾಸಕಲ್ಪನೆಗಳು, ಋಣಗಳು, ಔಪನಿಧಿಕಗಳು, ವಿಕ್ರೀತಕ್ರೀತಾನುಶಯಗಳು, ದಾನ, ಸಾಹಸಗಳು, ದಂಡಪಾರುಷ್ಯ ವಾಕ್ಪಾರುಷ್ಯಗಳು, ಅಸ್ವಾಮಿವಿಕ್ರಯಗಳು, ಸ್ವಸ್ವಾಮಿಸಂಬಂಧಗಳು, ಸೀಮಾವಿವಾದಗಳು, ಮರ್ಯಾದಾಸ್ಥಾಪನೆಗಳು, ವಾಸ್ತುಕಗಳು, ವಾಸ್ತವಿಕ್ರಯಗಳು, ವಿವೀತಕ್ಷೇತ್ರಪಥಹಿಂಸಾದಿಕಗಳು, ಬಾಧಾಬಾಧಿಕಗಳು, ವಿವಾಹಧರ್ಮಗಳು, ವಿವಾಹಸಂಯುಕ್ತಗಳು, ಸ್ತ್ರೀಧನಕಲ್ಪನೆಗಳು, ಸಂಭೂಯಸಮುತ್ಥಾನಗಳು, ದಾಯವಿಭಾಗ ದಾಯಕ್ರಮ ಮೊದಲಾದುವು ಧರ್ಮಸ್ಥೀಯಗಳಿಗೆ ವಿಷಯಗಳೆಂದು ಚಾಣಕ್ಯನ ಅರ್ಥಶಾಸ್ತ್ರದಲ್ಲಿ ವಿವರಿಸಲ್ಪಟ್ಟಿದೆ.

ಕಂಟಕಶೋಧನ ನ್ಯಾಯಸಂಘಗಳಲ್ಲಿ ಮೂವರು ಅಮಾತ್ಯರೂ, ಮೂವರು ಪ್ರದೇಷ್ಟಾರರೂ ಅಧಿಕಾರಿಗಳು. ಅಮಾತ್ಯರು ಲೋಕಾನುಭವವುಳ್ಳ ಮಂತ್ರಿವರ್ಗದವರೆಂದು ಈ ಮೊದಲೇ ಬರೆದಿರುವೆವು. ಸ್ಥಳೀಯರಾಗಿದ್ದು ವಿಷಯಗಳನ್ನು ಚೆನ್ನಾಗಿ ವಿಮರ್ಶೆಮಾಡಿ ಕಂಡುಕೊಳ್ಳುವುದಕ್ಕೆ ಯೋಗ್ಯತೆಯುಳ್ಳ ಅಧಿಕಾರಿಗಳು ಮೂವರಿಗೆ ಪ್ರದೇಷ್ಟಾರರೆಂದು ಹೆಸರು. ಇವರು ಯಾವ ಅಭಿಯೋಗ ಬಂದರೂ ಅದಕ್ಕೆ ಬೇಕಾದ ಉಪಕ್ರಮ ಪ್ರಯತ್ನಗಳನ್ನೂ ಪರೀಕ್ಷೆಗಳನ್ನೂ ಮಾಡಿ, ಅಮಾತ್ಯರಿಗೆ ಸಹಾಯಮಾಡತಕ್ಕವರು. ರಾಜನಿಗೂ ರಾಜ್ಯಕ್ಕೂ ಸಂಬಂಧಿಸಿದ ಅಪರಾಧಗಳೂ, ಪ್ರಜೋಪದ್ರವಕರಗಳಾದ ತಪ್ಪಿತಗಳೂ, ಹತ್ಯೆ ಮೊದಲಾದ ಘನದೋಷಗಳೂ, ಬಹುಜನ ಸಂಬಂಧಕಗಳೂ, ಈ ಕಂಟಕಶೋಧನೆಗಳಿಗೆ ವಿಷಯಗಳು. ಮರಣದಂಡನೆಯನ್ನು ವಿಧಿಸುವುದಕ್ಕೆ ಕೂಡ ಇವರಿಗೆ ಅಧಿಕಾರವಿದ್ದಿತು.[2]

ಮೇಲೆ ಹೇಳಿದ ಎರಡು ತೆರನಾದ ಸಂಘಗಳೂ, ಸಂಗ್ರಹಣಗಳಲ್ಲಿ, ಎಂದರೆ ನಮ್ಮ ತಾಲೂಕು ಪಟ್ಟಣಗಳಂತಿರುವ ಪಟ್ಟಣಗಳಲ್ಲಿಯೂ, ನಾಲ್ನೂರು ಗ್ರಾಮಗಳಿಗೆ ಮುಖ್ಯ ಪಟ್ಟಣಗಳಾದ ದ್ರೋಣಮುಖಗಳಲ್ಲಿಯೂ, ಎಂಟುನೂರು ಗ್ರಾಮಗಳಿಗೆ ಮುಖ್ಯಪಟ್ಟಣಗಳಾದ ಸ್ಥಾನೀಯಗಳಲ್ಲಿಯೂ, ಪ್ರತಿ ಜನ ಪಥ ಸಂಧಿಗಳಲ್ಲಿಯೂ, ಎಂದರೆ ಎರಡು ಮೂರು ಮಂಡಲಗಳ ಎಲ್ಲೆಗಳು ಕೂಡುವಲ್ಲಿಯೂ, ನಿರ್ಣೀತ ಕಾಲಗಳಲ್ಲಿ ಸೇರಿ ನ್ಯಾಯಗಳನ್ನು ತೀರಿಸುತ್ತಿದ್ದುವು.

ಈ ನ್ಯಾಯ ಸಂಘಗಳಿಗೆ ಅನುಸರಣೀಯವಾದ ಸಾಧನಗಳು ನಾಲ್ಕುವಿಧದವು. ಮೊದಲನೆಯದು ಧರ್ಮವು. ಇದು ಶಾಸ್ತ್ರಚೋದಿತವು. ವ್ಯಾಖ್ಯಾನಭೇದವಿದ್ದಾಗಲೇ ಅಲ್ಲದೆ ಇದು ಅನುಲ್ಲಂಘನೀಯವು. ಎರಡನೆಯದು ವ್ಯವಹಾರವು. ವಾದಿಪ್ರತಿವಾದಿಗಳು ಆ ಮೊದಲು ಮಾಡಿಕೊಂಡ ಒಡಂಬಡಿಕೆಗಳು ಮೊದಲಾದ ಉಪಕರಣಗಳೂ, ಸಾಕ್ಷಿಗಳ ಸಾಕ್ಷ್ಯವೂ ಇದರಲ್ಲಿ ಬರುತ್ತಿದೆ. ಮೂರನೆಯದು ಚರಿತ್ರೆ ಎಂದರೆ, ಆಚಾರಾದಿಗಳನ್ನನುಸರಿಸಿ ಏರ್ಪಟ್ಟ ತೀರ್ಮಾನ ಸಮುದಾಯವು. ನಾಲ್ಕನೆಯದು, ರಾಜಶಾಸನವು, ಎಂದರೆ, ರಾಜರು ಪರಂಪರೆಯಾಗಿ ಏರ್ಪಡಿಸಿಕೊಂಡು ಬಂದ ಕಟ್ಟಡಕಗಳು. ಇವುಗಳಲ್ಲಿ ಕೊನೆಯ ಮೂರು ಸಾಧನಗಳೂ ಒರಸೆಯಾಗಿ ಬಲವತ್ತಮ, ಬಲವತ್ತರ, ಬಲವಂತಗಳು. ಆದರೆ ಇವುಗಳಲ್ಲಿ ಯಾವುದಾದರೂ ಧರ್ಮವಿರುದ್ಧವಾಗಿಯಾಗಲೀ ನ್ಯಾಯವಿರುದ್ಧವಾಗಿಯಾಗಲೀ ಇದ್ದಲ್ಲಿ ಅನನುಸರಣೀಯವಾಗದ್ದಿತು.

2 ಕಾರಕರಕ್ಷಣ, ವೈದೇಹರಕ್ಷಣ, ಉಪನಿಪಾತಪ್ರತೀಕಾರ, ಉಪಕರ್ಮಾಭಿಗ್ರಹ, ಆಶುಮೃತಕಪರೀಕ್ಷಾ. ವಾಕ್ಯಕರ್ಮಾನುಯೋಗ, ಸರ್ವಾಧಿಕರಣರಕ್ಷಣ, ಕನ್ಯಾಪ್ರಕರ್ಮ, ಮೊದಲಾದುವು ಕುಟುಂಬಶೋಧನಗಳಿಗೆ ವಿಷಯಗಳೆಂದು ಚಾಣಕ್ಯನ ಅರ್ಥಶಾಸ್ತ್ರವು ತಿಳಿಸುತ್ತಿದೆ.

ಸರ್ವ ಜನರಿಗೂ ಸಾಮಾನ್ಯವಾಗಿ ತಿಳಿದ ಈ ನಾಲ್ಕು ಸಾಧನಗಳಲ್ಲದೆ, ನ್ಯಾಯಸಂಘಗಳಿಗೆ ಮತ್ತೊಂದು ಸಾಧನವಿದ್ದಿತು. ಅದು ಗೂಢಚಾರರ ಸಮೂಹವು. ಅವರು ದೇಶದೊಳಗಣ ಪ್ರತಿವಿಷಯವನ್ನೂ ಕಂಡುಕೊಂಡು ರಾಜನಿಗೆ ತಿಳಿಸುವುದು ಮಾತ್ರವೇ ಅಲ್ಲದೆ, ಅಗತ್ಯವಾದ ಸಂಗತಿಗಳನ್ನು ನ್ಯಾಯಸಂಘದವರಿಗೂ ತಿಳಿಯಗೊಡುತ್ತ ನ್ಯಾಯವಿಚಾರಣೆಗೆ ಸಹಾಯಕರಾಗಿರಲು ನಿಯಮಿಸಲ್ಪಟ್ಟಿದ್ದರು. ಆದರೆ ಅವರ ವಾರ್ತೆಗಳನ್ನು ಮಾತ್ರ ನ್ಯಾಯಾಧಿಕಾರಿಗಳು ಬಹು ಜಾಗರೂಕತೆಯಿಂದ ಪರೀಕ್ಷಿಸುತ್ತಿದ್ದರು. ಇತರ ಆಧಾರಗಳು ಸಂಪೂರ್ಣವಾಗಿದ್ದಾಗಲೇ ಅಲ್ಲದೆ ಈ ಸಾಧನವನ್ನು ಉಪಯೋಗಿಸುತ್ತಿರಲಿಲ್ಲ.

ಚಂದ್ರುಗುಪ್ತನ ಕಾಲದ ನಿಬಂಧನೆಗಳು ಪರಿಪೂರ್ಣತ್ವದಲ್ಲಿ ಈಗಲಿನ ಕಾಯಿದೆಗಳಿಗೇನೂ ಕಡಿಮೆಯಾದುವಲ್ಲ. ಹೆಂಡತಿಯು ಮೂರ್ಖಳಾಗಿದ್ದಾಗ ಗಂಡನು ಆಕೆಯನ್ನು ಎಷ್ಟರವರೆಗೆ ಪಾರುಷ್ಯದಿಂದ ನೋಡಬಹುದೆಂಬುದನ್ನು ತಿಳಿಸಿ ಆಕೆಯನ್ನು ಬಿದಿರ ಕೋಲಿಂದಾಗಲಿ, ಹಗ್ಗದಿಂದಾಗಲಿ, ತನ್ನ ಅಂಗೈಯಿಂದಾಗಲಿ ಗಂಡನು ಮೂರು ಏಟುಗಳಿಗಿಂತ ಹೆಚ್ಚಾಗಿ ಹೊಡೆದವನು ನ್ಯಾಯ ತಪ್ಪಿದವನಾಗಿ ಶಿಕ್ಷೆಗೆ ಅರ್ಹನಾಗುವನೆಂದು ಬರೆಯಲ್ಪಟ್ಟಿದೆ. ಇದರಿಂದ ನಮ್ಮ ಸಿದ್ಧಾಂತವು ನಿಶ್ಚಯವೆಂದು ಸ್ಥಿರವಾಗುವುದರಿಂದ ವಿಶೇಷವಾಗಿ ಅದರವಿಷಯವಾಗಿ ಬರೆವ ಅಗತ್ಯವಿರುವುದಿಲ್ಲ.



## ಈತಿಬಾಧೆಗಳು—ಅವುಗಳ ನಿವಾರಣೆ.

ಅತಿವೃಷ್ಟಿರನಾವೃಷ್ಟಿಃ ಶಲಭಾ ಮೂಷಕಾಃ ಶುಕಾಃ |
ಪ್ರತ್ಯಾಸನ್ನಾಶ್ಚ ರಾಜಾನಃ ಷಡೇತಾ ಈತಯಃ ಸ್ಮೃತಾಃ ||

ಈತಿಬಾಧೆಗಳು ಆರು ಎಂಬುದಾಗಿ ವರ್ಣಿಸಲ್ಪಟ್ಟಿವೆ. ಇವುಗಳಿಂದ ಪ್ರಜೆಗಳನ್ನು ರಕ್ಷಿಸಿ ಪರಿಪಾಲಿಸಿದವನೇ ಧರ್ಮವನ್ನು ನೆರವೇರಿಸಿದ ರಾಜನೆಂಬುದು ನಮ್ಮ ಶಾಸ್ತ್ರಕಾರರ ಮತವು. ಮಿಡಿತೆ, ಇಲಿ, ಗಿಳಿ ಮೊದಲಾದುವುಗಳನ್ನು ಬೇಟೆಯಿಂದಲೂ ಔಷಧಗಳಿಂದಲೂ, ಪ್ರಾಂತಿಕರಾಜರನ್ನು ಯುದ್ಧಮೂಲವಾಗಿಯೂ ನಿವಾರಿಸುತ್ತಿದ್ದರು. ಚಂದ್ರುಗುಪ್ತನು ಈ ಎರಡು ಸಾಧನಗಳನ್ನೂ ಸಂಪೂರ್ಣವಾಗಿ ನಡೆಯಿಸುತ್ತಿದ್ದನೆಂಬುದು ಆತನ ಚರಿತ್ರೆಯನ್ನು ಮೊದಲಿನಿಂದ ಕೊನೆಯವರೆಗೆ ಓದಿದವರೆಲ್ಲರಿಗೂ ವಿದಿತವೇ ಆಗಿದೆ. ಆ ಕಾಲದಲ್ಲಿ ಮನೆಗಳು ಸರ್ವಸಾಧಾರಣವಾಗಿ ಮರದಿಂದ ಕಟ್ಟಲ್ಪಡುತ್ತಿದ್ದುದರಿಂದ, ಅತಿವೃಷ್ಟಿಬಾಧೆಯು ಒಂದಂ

ಶಕ್ಕೆ ಪ್ರತೀಕಾರವಾಗಿದ್ದಂತೆ ತೋರುವುದು. ಆದರೆ ಅತಿವೃಷ್ಟಿಯಿಂದಲೂ ಅನಾವೃಷ್ಟಿಯಿಂದಲೂ ಉಂಟಾಗುವ ದೊಡ್ಡ ಬಾಧೆಗಳು ಕ್ಷಾಮಗಳಾಗಿ ಪರಿಣಮಿಸಿ, ಅದರಿಂದ ಜಾಡ್ಯಗಳು ಉಂಟಾಗುವುವು. ಇವೇ ಅಲ್ಲದೆ ಮೇಲಣ ಶ್ಲೋಕದಲ್ಲಿ ಹೇಳಲ್ಪಡದ ಮತ್ತೊಂದು ಕಾರಣವೂ ಇದೆ. ಅದು ಅಗ್ನಿ. ಈ ಮೂರು ಬಾಧೆಗಳನ್ನೂ ನಿವಾರಿಸುವುದಕ್ಕೆ ತೆರತೆರನಾಗಿ ಎಲ್ಲ ಪ್ರಭುತ್ವದವರೂ ಪ್ರಯತ್ನಪಡುತ್ತಲೇ ಇರುವರು. ಚಂದ್ರಗುಪ್ತನ ಕಾಲದಲ್ಲಿ ಆತನು ಹೇಗೆ ಪ್ರವರ್ತಿಸಿದನೆಂಬುದು ಇಲ್ಲಿ ವಿವರಿಸತಕ್ಕುದಾಗಿದೆ.

ಮೆಗಾಸ್ತನೀಸನ ಲೇಖನಗಳನ್ನನುಸರಿಸಿ ಆ ಕಾಲದಲ್ಲಿ ಸರ್ವಸಾಧಾರಣವಾಗಿ ಚಂದ್ರಗುಪ್ತನ ಸಾಮ್ರಾಜ್ಯವು ಸುಭಿಕ್ಷವಾಗಿದ್ದಿತೆಂತಲೇ ಹೇಳಬೇಕಾಗಿದೆ. ಆದರೆ ಅರ್ಥಶಾಸ್ತ್ರದಲ್ಲಿ ದುರ್ಭಿಕ್ಷಗಳ ಸಂಗತಿಯನ್ನು ಹೇಳಿ, ತತ್ಪ್ರತೀಕಾರಪದ್ಧತಿಗಳನ್ನು ವಿಸ್ತಾರವಾಗಿ ಹೇಳಿರುವುದನ್ನು ನೋಡಿದರೆ, ಕ್ಷಾಮವು ಯಾವುದೋ ಒಂದು ವೇಳೆಯಲ್ಲಿ ಉಂಟಾಗಿದ್ದರೂ ಇರಬಹುದು.

ಕೋಷ್ಠಾಗಾರಾಧ್ಯಕ್ಷ 1 ನೆಂಬ ಅಧಿಕಾರಿಯೊಬ್ಬನಿರುವನು. ಅವನು ರಾಜನಿಗಾಗಿ ಬರುವ ಸರ್ವಸಸ್ಯಾದಿಗಳನ್ನು ಒಟ್ಟುಗೂಡಿಸಿ ಕಾಪಾಡುವನು. ಅಂತಹ ಒಟ್ಟುಗೂಡಿಸಿಟ್ಟ ಭೋಜನಸಾಮುಗ್ರಿಯಲ್ಲಿ ರಾಜನು ಯಾವಾಗಲೂ ಅರ್ಧಪಾಲಿಗಿಂತ ಹೆಚ್ಚಾಗಿ ಉಪಯೋಗಿಸಬಾರದು. ಮಿಕ್ಕ ಅರ್ಧಭಾಗವನ್ನು ಪ್ರಜೆಗಳ ಅವಸರಗಳಿಗಾಗಿ ತೆಗೆದಿಡುತ್ತಿದ್ದರು. ಧಾನ್ಯಾದಿಗಳು ಕೆಟ್ಟುಹೋಗದಿರುವುದಕ್ಕಾಗಿ ಪ್ರತಿವರ್ಷವೂ ಅದುವರೆಗೆ ಸೇರಿಸಿದ ರಾಶಿಗಳನ್ನು ಇತರರಿಗೆ ಕೊಟ್ಟು ಹೊಸ ಬೆಳೆಯ ಫಲದಿಂದ ಬದಲಾಯಿಸಿಕೊಳ್ಳುತ್ತಿದ್ದರು. ಹೀಗೆ ಸಂಗ್ರಹಿಸಲ್ಪಟ್ಟ ಸಾಮುಗ್ರಿಗಳುಳ್ಳವನಾದುದರಿಂದ ಕ್ಷಾಮಕಾಲದಲ್ಲಿ ರಾಜನು ಪ್ರಜೆಗಳಿಗೆ ಭೋಜನಕ್ಕೂ ಬಿತ್ತನೆಗೂ ಧಾನ್ಯವನ್ನು ಹಂಚಿಕೊಡುತ್ತಿದ್ದನು. ಧನವಂತರಾದ ಪೌರಜನರಿಂದಲೂ ಇತರ ರಾಜರಿಂದಲೂ ಹಣವನ್ನು ಸಂಪಾದಿಸಿ, ಕ್ಷಾಮನಿವಾರಣೆಗಾಗಿ ಉಪಯೋಗಿಸುತ್ತಿದ್ದನು.

ನಮ್ಮ ಪ್ರಭುತ್ವದವರಂತೆಯೇ ದುರ್ಭಿಕ್ಷಸಮಯದಲ್ಲಿ ಚಂದ್ರಗುಪ್ತನು ದೊಡ್ಡ ದಾರಿಗಳನ್ನು ಮಾಡಿಸುವುದು, ಕೆರೆ ಕಾಲುವೆಗಳನ್ನು ತೋಡಿಸುವುದು, ಮೊದಲಾದ ಕೆಲಸಗಳನ್ನು ಮಾಡಿಸುತ್ತಿದ್ದಂತೆಯೂ ತಿಳಿಯಬರುತ್ತಿದೆ.

---

1 ಕೋಷ್ಠವೆಂದರೆ ಜೀರ್ಣಕೋಶವು. ಅದರಿಂದ ದೇಹಕ್ಕೆ ಪೋಷಣೆಮಾಡುವ ವಸ್ತುಗಳೆಂದು ವಿಶೇಷಾರ್ಥವು. ಅಂತಹ ವಸ್ತುಗಳನ್ನು ತುಂಬಿಡುವ ಸ್ಥಳವು ಕೋಷ್ಠಾಗಾರವು. ಅರ್ಥಶಾಸ್ತ್ರ ಸಂ. ೨ ಅ. ೧೫.

ಕ್ಷಾಮಗಳು ಪ್ರತಿದಿನ ಪ್ರವರ್ಧಮಾನಗಳಾಗಿರದೆ ಯಾವಾಗಲೋ ಒಮ್ಮೆ ಉಂಟಾಗುತ್ತಿದ್ದರೂ, ತನ್ನ ಆದಾಯದಲ್ಲಿ ಅರ್ಧಭಾಗವನ್ನು ಅದರ ನಿವಾರಣೆಗಾಗಿ ವಿನಿಯೋಗಿಸುವುದಕ್ಕೆ ಸಾರ್ವಭೌಮನು ಸನ್ನದ್ಧನಾಗಿರುವುದನ್ನು ನೋಡಿದರೆ ಆ ಕಾಲದಲ್ಲಿ ಪ್ರಜೆಗಳು ಕ್ಷಾಮಭಯವಿಲ್ಲದೆಯೇ ಇರುತ್ತಿದ್ದರೆಂದರೆ ಅನೃತವಾಗದು.

ಜಾಡ್ಯಗಳ ನಿವಾರಣೆಗಾಗಿ ಚಂದ್ರಗುಪ್ತನು ಪೂರ್ಣವಾದ ಏರ್ಪಾಡುಗಳನ್ನು ಮಾಡಿದ್ದನೆಂಬುದಕ್ಕೆ ಸಂದೇಹವಿಲ್ಲ. ಆನೆಗಳಿಗೂ ಕುದುರೆಗಳಿಗೂ ಚಿಕಿತ್ಸೆಗಳನ್ನೇರ್ಪಡಿಸಿದವನಿಗೂ, ಈಗಳಿನ ಕಾಲದಲ್ಲಿಯೂ ಅಪರೂಪವಾಗಿ ಕಾಣಿಸುವ ದಾದಿಗಳನ್ನು ಸೈನ್ಯಗಳಿಗೆ ಉಪಯೋಗವಾಗುವಂತೆ ಮಾಡಿದ ಸಾರ್ವಭೌಮನಿಗೂ ಪ್ರಜೆಗಳ ಆರೋಗ್ಯದ ಕಡೆಗೆ ದೃಷ್ಟಿಯು ನಿಲ್ಲದಿರುವುದೇ? ಮೆಗಾಸ್ತನೀಸು ಪಾಟಲೀಪುರದ ಪರಿಪಾಲನೆಗೆ ಏರ್ಪಟ್ಟ ಆರು ಪಂಚಾಯತರಲ್ಲಿ ಅನ್ಯದೇಶೀಯರನ್ನು ಕಾಪಾಡುವ ಪಂಚಾಯತಿಯನ್ನು ಕುರಿತು ಬರೆಯುತ್ತ: "ದೇಹಾಲಸ್ಯವಿರುವವರಿಗೆ ಬೇಕಾದ ಉಪಚಾರಗಳನ್ನು ಜಾಗರೂಕತೆಯಿಂದ ಮಾಡುವುದು" ಎಂದು ಬರೆದಿರುವನು. ಇದರಿಂದ ಆ ಪಂಚಾಯತಿಯೊಳಗಣ ವೈದ್ಯರು ತತ್ತದುಚಿತ ಉಪಕರಣಗಳೊಡನೆ ಸಿದ್ಧವಾಗಿರುತ್ತಿದ್ದರೆಂದು ಅರ್ಥವು. ವಾರಣಾಸಿಯೂ, ತಕ್ಷಶಿಲಾನಗರವೂ ವಿದ್ಯಾಪೀಠಗಳಾಗಿ ಶೋಭಿಸುತ್ತ ವೈದ್ಯಶಾಸ್ತ್ರಪ್ರವೀಣರನ್ನು ದೇಶಕ್ಕೆ ಒದವಿಸುತ್ತಿದ್ದುವೆಂಬುದಾಗಿ ಈ ಮೊದಲೇ ಬರೆದಿರುವೆವು. ಅಲಕಸುಂದರನು (ಅಲೆಗ್ಝಾಂಡರು) ಈ ದೇಶದ ಮೇಲೆ ದಂಡೆತ್ತಿಬಂದಾಗ ಗ್ರೀಕ್‌ದೇಶೀಯರಾದ ತನ್ನ ಭಿಷಙ್ಮಣಿಗಳನ್ನು ಸಂಗಡ ಕರೆದುಕೊಂಡು ಬಂದನು. ಪಾಂಚಾಲದೇಶದಲ್ಲಿ ಆತನಿದ್ದಾಗ ಆತನ ಸೈನಿಕರಿಗೆ ಹಾವುಗಳ ಕಾಟವು ತಪ್ಪಲಿಲ್ಲ. ಆ ಅಪಾಯಕರವಾದ ಉಪದ್ರವದಿಂದ ಗ್ರೀಕ್‌ವೈದ್ಯರು ತಮ್ಮವರನ್ನು ರಕ್ಷಿಸಿಕೊಳ್ಳುವ ಮಾರ್ಗವನ್ನು ಕಾಣದೆಹೋದರು. ಆಗ ಅಲೆಗ್ಝಾಂಡರು ಹಿಂದೂವೈದ್ಯರ ಸಹಾಯವರ್‍ನ್ನು ಕೇಳಿಕೊಳ್ಳಲು ಅವರು ಕೂಡಲೆ ವ್ಯಾಳವಿಷಾನಲದಿಂದ ಗ್ರೀಕರನ್ನು ತಪ್ಪಿಸಿದರು. ಅದರಿಂದ ಆತನು ಆಶ್ಚರ್ಯಗೊಂಡು ಹಿಂದೂವೈದ್ಯರ ಶಕ್ತಿಸಾಮರ್ಥ್ಯಗಳಿಗೆ ಮೆಚ್ಚಿ, ತನ್ನ ಸೈನಿಕರಿಗೆ ಅಪಾಯಕರವಾದ ರೋಗಗಳು ಸಂಭವಿಸಿದಾಗಲೆಲ್ಲ ಹಿಂದೂವೈದ್ಯರ ಹತ್ತಿರಕ್ಕೇ ಹೋಗತಕ್ಕುದೆಂದು ಆಜ್ಞಾಪಿಸಿದನು. 1 ಗ್ರೀಕ್ ಚರಿತ್ರಕಾರನು ಬರೆದ ಈ ಲೇಖನವನ್ನು ನೋಡಲಾಗಿ, ಗ್ರೀಕ್‌ವೈದ್ಯರಿಗಿಂತಲೂ, ಹಿಂದೂ ವೈದ್ಯರೇ ಅಗಿನ ಕಾಲದಲ್ಲಿ ಬುದ್ಧಿವಂತರಾಗಿದ್ದರೆಂಬುದು ಗೊತ್ತಾಗುವುದು.

---

1 Arrian.

ಚಂದ್ರಗುಪ್ತನ ಕಾಲದಲ್ಲಿ ಭಿಷಜರೆಂತಲೂ, ಚಿಕಿತ್ಸಕರೆಂತಲೂ, ಜಾಂಗಲೀವಿದರೆಂತಲೂ, ಸೂತಿಕಾ ಚಿಕಿತ್ಸಕರೆಂತಲೂ, ವೈದ್ಯರು ಅವರವರ ಅಭಿಮಾನ ವೈದ್ಯಶಾಖೆಯ ಹೆಸರಿಗೆ ತಕ್ಕಂತೆ ಕರೆಯಲ್ಪಡುತ್ತಿದ್ದರು.

ಭಿಷಜರು ಸರ್ವವೈದ್ಯವಿಶಾರದರು. ಚಿಕಿತ್ಸಕರು ಸಾಧಾರಣ ವೈದ್ಯರು. ಜಾಂಗಲೀವಿದರು ವಿಷವೈದ್ಯರು. ಸೂತಿಕಾ ಚಿಕಿತ್ಸಕರೆಂಬುವರು ಮಂತ್ರಸಾನಿಗಳು. ಇಲ್ಲವೇ ಸೂಲಗಿತ್ತಿಯರು. ಧಾತ್ರಿಕರೂ ಸೈನ್ಯದ ಹಿಂದೆ ನಡೆವ ರಣವೈದ್ಯರೂ ಈ ತರಗತಿಗೆ ಸೇರಿದವರೇ.

ಮೂರು ಮೂಲಿಕೆಗಳ ಹೆಸರರಿತವರೆಲ್ಲರೂ ವೈದ್ಯರಾಗಿರುವುದಕ್ಕೆ ಸಾಧ್ಯವಿದ್ದಿಲ್ಲ. ಪ್ರಭುತ್ವದವರ ಅನುಮತಿಯಿಲ್ಲದೆ ಯಾರೂ ವೈದ್ಯವೃತ್ತಿಯನ್ನವಲಂಬಿಸಲೂ, *ಆ ವೃತ್ತಿಯಲ್ಲಿದ್ದು ಅಜಾಗರೂಕರಾಗಿರಲೂ ಬರುತ್ತಿರಲಿಲ್ಲ. ವೈದ್ಯನ ಲೋಪದಿಂದ ರೋಗಿಗೆ ಅಪಾಯವುಂಟಾದಲ್ಲಿ ವೈದ್ಯನು ದಂಡಾರ್ಹನಾಗಿದ್ದನು. ಅನುಮಾನಾಸ್ಪದವಾದ ಮರಣವುಂಟಾದಲ್ಲಿ, ಈ ಇಪ್ಪತ್ತನೆಯ ಶತಮಾನದಲ್ಲಿನಂತೆಯೇ ಆಗಲೂ ಶವವನ್ನು ಸಿಗಿದು ಆಶುಮೃತಿಪರೀಕ್ಷೆಯನ್ನು ಮಾಡುತ್ತಿದ್ದರು.

ಇಂತಹ ನಿಯಮಗಳಿಂದ ವೈದ್ಯರ ಸಮೂಹವಿದ್ದ ಬಳಿಕ, ಎಂತಹ ವಿಶೇಷ ರೋಗಬಂದರೂ ತಕ್ಕ ಸಹಾಯವು ದೊರೆಯುತಿದ್ದಿತೆಂದು ಪ್ರತ್ಯೇಕವಾಗಿ ಬರೆಯಬೇಕಾದುದಿಲ್ಲ. ಕ್ಷಾಮಾದಿಗಳ ಫಲವಾಗಿ ಉಂಟಾದ "ಮಾರಕ" ವ್ಯಾಧಿಗಳನ್ನು ನಿರ್ನಾಮಗೊಳಿಸುವ ವೈದ್ಯರು ತಮ್ಮತಮ್ಮ ಔಷಧದ ಕರಾಟಗಳೊಡನೆ ಸಿದ್ಧರಾಗಿರುತ್ತಿದ್ದರು. ಅವರೊಡನೆಯೇ ದೈವಪ್ರಾರ್ಥನಾದಿ ಕಾರ್ಯಗಳನ್ನು ನಡೆಯಿಸಿ ಬಂದ ಆಪತ್ತನ್ನು ಹೋಗಲಾಡಿಸುವದಕ್ಕೆ ಸಾಧುಜನರೂ ಪ್ರಯತ್ನಪಡುತ್ತಿದ್ದರು.

ಅಗ್ನಿಬಾಧೆಯಿಲ್ಲದಂತೆ ಮಾಡುವುದಕ್ಕೆ ತಕ್ಕ ನಿರ್ಬಂಧಗಳೂ ಪರಿಕರಗಳೂ ಏರ್ಪಟ್ಟಿದ್ದುವು. ಬೇಸಗೆಯ ಕಾಲದಲ್ಲಿ ಗ್ರಾಮದ ಜನರು ಬೆಂಕಿಯನ್ನಾರಿಸುವ ಹತ್ತು ಉಪಕರಣಗಳನ್ನು (೫ ಗಡಿಗೆಗಳು, ೧ ಕೊಡ, ೧ ತೊಟ್ಟಿ, ೧ ಏಣಿ, ೧ ಗುದ್ದಲಿ)—(ಇದು ಜಂತೆಗಳನ್ನೂ ತೊಲೆಗಳನ್ನೂ ಕೆಡಹುವುದಕ್ಕೆ,) ೧ಮೊರ (ಇದು ಹೊಗೆಯನ್ನು ಹೋಗಗೊಳಿಸುವುದಕ್ಕೆ) ೧ ಅಂಕುಶ, ೧ ಪಾತ್ರಸಾಮುಗ್ರಿಗಳ ಜತೆ, ೧ ಚರ್ಮದ ಚೀಲ) ತೆಗೆದುಕೊಂಡು ಸಿದ್ಧವಾಗಿರತಕ್ಕುದು ಮತ್ತು ಮನೆಯ ಹೊರಗಣ ಭಾಗದಲ್ಲಿಯೇ ಅಡಿಗೆ ಮಾಡಬೇಕಾಗಿದ್ದಿತು.

---

* ಈ ವಿಷಯದಲ್ಲಿ ಶಾಸನವನ್ನು ನಮ್ಮ ಪ್ರಭುತ್ವದವರು ಈಗಲೀಗ ಮಾಡಿ, ಪ್ರಚಾರಕ್ಕೆ ತಂದಿರುವರು.

ಎಲ್ಲಿಯಾದರೂ ಅಗ್ನಿಬಾಧೆಯುಂಟಾದಲ್ಲಿ ಆ ಪ್ರಾಂತದಲ್ಲಿಯ ಗೃಹಸ್ಥರೆಲ್ಲರೂ ತಮ್ಮ ತಮ್ಮ ಉಪಕರಣಗಳನ್ನು ತೆಗೆದುಕೊಂಡು ಹೊರಟು ಆ ಬೆಂಕಿಯನ್ನಾರಿಸಬೇಕಾಗಿದ್ದಿತು. ಹಾಗೆ ಮಾಡದವರಿಗೆ ಶಿಕ್ಷೆಯು ವಿಧಿಸಲ್ಪಡುತ್ತಿದ್ದಿತು.



## ಪಂಚಾಯತರು.

ಪುರಪರಿಪಾಲನಾಕ್ರಮಗಳು ಎಂತಹವೆಂಬುದು ಪಾಟಲೀಪುತ್ರವರ್ಣನಾಧ್ಯಾಯದಲ್ಲಿ ವಿಸ್ತರಿಸಲ್ಪಟ್ಟದೆ. ಸೈನ್ಯವ್ಯವಸ್ಥೆಯ ಪ್ರಕರಣದಲ್ಲಿ ಅದರ ಪರಿಪಾಲನಾಕ್ರಮವೂ ವಿವರಿಸಲ್ಪಟ್ಟದೆ. ಒಟ್ಟನಮೇಲೆ ವ್ಯಕ್ತವಾಗುವ ಅಂಶವಾವುದೆಂದರೆ, ಸಮಸ್ತಾಂಶಗಳಿಗೂ, ಪಂಚಾಯತಿ ಪರಾಮರ್ಶೆಯೆಂಬ ಪದ್ಧತಿಯೇ ಮುಖ್ಯಾಧಾರವಾಗಿ ಗ್ರಹಿಸಲ್ಪಟ್ಟಿರುವುದು. ಪುರಪಾಲನೆಗೆ ಆರು ಪಂಚಾಯತರು, ಸೈನ್ಯನಿರ್ವಹಣಕ್ಕೆ ಆರು ಪಂಚಾಯತರು, ಶಿಲ್ಪಿಗಳು, ವರ್ತಕರು, ಕರ್ಮಕಾರರು ಮೊದಲಾದ ವೃತ್ತಿಕುಲಗಳ ವಿಮರ್ಶೆಗಾಗಿ ಆಯಾ ಕುಲಕ್ಕೆ ಆಯಾ ಕುಲಸ್ಥರ ಪಂಚಾಯತಿಗಳು, ಗ್ರಾಮಪಾಲನಕ್ಕೆ ಗ್ರಾಮಪಂಚಾಯತಿಗಳು, ಎಂದು ಹೀಗೆ ಪಂಚಾಯತಿ ಪುಂಜವಾಗಿದ್ದಂತೆ ತೋರಿಬರುವುದು. ಕೆಲವು ಪಂಚಾಯತಿಗಳು ರಾಜನಿರ್ಮಿತಗಳು; ಕೆಲವು ರಾಜಪುರುಷ ನಿರ್ಮಿತಗಳು. ಮಿಕ್ಕವುಗಳೆಲ್ಲ ಜನಸಮುದಾಯನಿರ್ಮಿತಗಳು. ಅತ್ಯಂತ ಬಲಿಷ್ಠರಾಜಕಾರ್ಯಗಳ ಹೊರತು ಮಿಕ್ಕವೆಲ್ಲವೂ ಜನನಿಯುಕ್ತ ಪಂಚಾಯತಿಗಳು. ಇವುಗಳಲ್ಲಿಯೂ ಗ್ರಾಮ ಪ್ರಮುಖರಾಗಲೀ, ರಾಜಪುರುಷರಾಗಲೀ ಅಧ್ಯಕ್ಷರಾಗಿರುತ್ತಿದ್ದರು. ಆದುದರಿಂದ ರಾಜಭಕ್ತಿಗೆ ವಿರೋಧವಿಲ್ಲದಂತೆಯೂ, ಜನರ ಸ್ವಾತಂತ್ರ್ಯಕ್ಕೆ ಲೋಪವಿಲ್ಲದಂತೆ ಯೂ, ಕಾರ್ಯಗಳೆಲ್ಲವೂ ನಿರ್ವಹಿಸಲ್ಪಡುತ್ತಿದ್ದುವು. ಮತ್ತು ಪಂಚಾಯತಿಯವರು ತಾವು ತೀರ್ಮಾನಿಸುವ ವಿಷಯದಲ್ಲಿ ಪ್ರತ್ಯಕ್ಷ ಜ್ಞಾನಾನುಭವಗಳನ್ನುಳ್ಳವರಾಗಿಯೂ, ವಾದಿಪ್ರತಿವಾದಿ ಸಾಕ್ಷಿಗಳ ಪೂರ್ವೋತ್ತರಗಳನ್ನು ತಿಳಿದವರಾಗಿಯೂ, ಆಯಾ ಜನಸಮುದಾಯಕ್ಕೆ ಸತ್ಯಸಾತ್ವಿಕಾದಿಗಳ ಯಶೋಮಾನಗಣ್ಯತಾಬದ್ಧರಾಗಿಯೂ ಇರುವುದರಿಂದ ಅದರ ನಿರ್ಣಯಗಳು ನ್ಯಾಯವಾಗಿಯೂ, ಒಪ್ಪತಕ್ಕುವುಗಳಾಗಿಯೂ ಇದ್ದುವು. ಅವರು ಜನಸಮುದಾಯದ ಕ್ಷೇಮಾಭಿವೃದ್ಧಿಗಳ ವಿಷಯದಲ್ಲಿ ಸಹಜಪ್ರೀತಿಯುತರಾದುದರಿಂದ, ಆ ಸಮುದಾಯದ ಅವಯವೀಭೂತರಾಗಿದ್ದುದರಿಂದಲೂ, ವಿವಾದನಿರ್ಣಯಕ್ಕಾಗಿ ಅನಗತ್ಯ ವ್ಯಯಗಳಿಗೆ ಆಸ್ಪದವಿರಲಿಲ್ಲ. ಹೀಗಾಗಿ ನ್ಯಾಯನಿರ್ಣಯಗಳು ಸುಲಭಸಾಧ್ಯವಾಗಿದ್ದು ಜನರಿಗೆ ಸುಖಕರಗಳಾಗಿದ್ದುವು. ಈ ಕಾಲದಲ್ಲಿರುವಂತೆ ವ್ಯಾಜ್ಯಗ

ಟಿಗೆ ಆಗುವ ಕಾಲವಿಳಂಬವಾಗಲೀ, ಹಲವು ತೆರನಾದ ದ್ರವ್ಯನಷ್ಟಗಳಾಗಲೀ, ನ್ಯಾಯವಾದಿಗಳು ತಲೆಕೆಳಗು ಮಾಡುವ ತರ್ಕವಿತರ್ಕಗಳಾಗಲೀ, ನ್ಯಾಯನಿರ್ಣಯ ವಿಪರೀತಗಳಾಗಲೀ, ವಿವಾದ ಮಾಡುವವರ ಇತರ ಕಾರ್ಯಭಂಗಗಳಾಗಲೀ, ಎಷ್ಟುಮಾತ್ರವೂ ಇರಲಿಲ್ಲವೆಂದು ನಂಬಬಹುದು. ಜನಸ್ವತಂತ್ರತಾಬುದ್ಧಿಯು ಪದೇಪದೇ ವಿರ್ಧಿಸುತ್ತ, ಪ್ರಜಾಗೌರವವೂ ಭದ್ರವಾಗಿ ರಕ್ಷಿಸಲ್ಪಡುತ್ತಿದ್ದಿತು. ರಾಜ್ಯಕ್ಷೇಮವೂ ಅಭಿವೃದ್ಧಿಹೊಂದುತ್ತಿದ್ದಿತು.



## ರಾಜನು.

ಈರೀತಿ ಸರ್ವವಿಧವಾಗಿಯೂ, ಪ್ರಜೆಗಳ ಸಂರಕ್ಷಣೆಯೇ ಪ್ರಥಮಕರ್ತವ್ಯವಾಗಿ ಮಾಡುತ್ತಿದ್ದ ಚಂದ್ರಗುಪ್ತನ ದಿನಚರ್ಯೆಯನ್ನು ಸ್ವಲ್ಪ ಇಲ್ಲಿ ಹೇಳಬೇಕಾಗಿದೆ.

ಹಗಲು ಎಂಟುಭಾಗಗಳಾಗಿಯೂ, ರಾತ್ರಿಯು ಎಂಟುಭಾಗಗಳಾಗಿಯೂ ವಿಭಾಗಿಸಲ್ಪಟ್ಟಿದ್ದಿತು. ಈ ಭಾಗಗಳಿಗೆ 'ನಾಳಿಕೆ' ಎಂಬ ಹೆಸರು. ದಿವಸದ ಮೊದಲು ನಾಳಿಕೆಯನ್ನು ರಕ್ಷಕರನ್ನು ನಿಯಮಿಸುವುದರಲ್ಲಿಯೂ ಲೆಕ್ಕಗಳನ್ನು ಪರಿಶೀಲಿಸುವುದರಲ್ಲಿಯೂ ರಾಜನು ಕಳೆಯುತ್ತಿದ್ದನು. ಆಮೇಲೆ ಒಂದು ನಾಳಿಕೆಯ ಕಾಲ ಎಂದರೆ ಈಗಿನ 7-30 ಮೊದಲುಕೊಂಡು 9ರ ವರೆಗೂ ಪ್ರಜೆಗಳ ಕಷ್ಟನಿಷ್ಠುರಗಳನ್ನು ಕೇಳಿಕೊಳ್ಳುವುದು ಆತನ ಕೆಲಸವು. ಅನಂತರದ ನಾಳಿಕಾ ಕಾಲವು ಆತನ ಭೋಜನಾದಿಗಳಿಗೂ ಓದುವುದಕ್ಕೂ ವಿನಿಯೋಗಿಸಲ್ಪಡುತ್ತಿದ್ದಿತು. ನಾಲ್ಕನೆಯ ನಾಳಿಕೆಯನ್ನು ಕಪ್ಪ ಮೊದಲಾದ ಹಿರಣ್ಯಗಳನ್ನು ಗ್ರಹಿಸುವುದರಲ್ಲಿಯೂ ಅಧ್ಯಕ್ಷರನ್ನು ನಿಯಮಿಸುವುದರಲ್ಲಿಯೂ ಆತನು ಉಪಯೋಗಿಸುವನು. ಐದನೆಯ ನಾಳಿಕೆಯು ಮಂತ್ರಿವರ್ಗದೊಡನೆ ಜರುಗಬೇಕಾದ ಉತ್ತರಪ್ರತ್ಯುತ್ತರಗಳಿಗೆ ಏರ್ಪಟ್ಟಿದ್ದಿತು. ಆರನೆಯ ನಾಳಿಕೆಯು ಆಟಪಾಟಗಳಿಗೂ ವಿನೋದಗಳಿಗೂ ನಿಯಮಿತವು. ಏಳನೆಯ ನಾಳಿಕೆಯಲ್ಲಿ ಆನೆಗಳನ್ನೂ ಕುದುರೆಗಳನ್ನೂ ರಥಗಳನ್ನೂ ಕಾಲ್ಬಲಗಳನ್ನೂ ರಾಜನು ಪರೀಕ್ಷಿಸುವನು. ಎಂಟನೆಯ ನಾಳಿಕೆಯನ್ನು ಯುದ್ಧವಿಷಯವಾಗಿ ಸೇನಾಧ್ಯಕ್ಷನೊಡನೆ ಪರ್ಯಾಲೋಚಿಸುವುದರಲ್ಲಿ ಕಳೆಯುವನು. ರಾತ್ರಿಯಲ್ಲಿ ಮೊದಲ ನಾಳಿಕೆಯು ಗೂಢಚಾರರ ವಾರ್ತೆಗಳಿಗೂ, ಎರಡನೆಯದು ಸ್ನಾನಾದಿಗಳಿಗೂ, ಮೂರನೆಯದು ಮೃದಂಗಾದಿ ಸುಸ್ವನಗಳಿಂದ ನಿದ್ರೆಹೊಂದುವುದಕ್ಕೂ, ನಾಲ್ಕನೆಯ ಮತ್ತು ಐದನೆಯ ನಾಳಿಕೆಗಳು ನಿದ್ರೆಗೂ, ಆರನೆಯದು ಮಂಗಳಾರಾವಕ್ಕೆ ಎಚ್ಚತ್ತು ಧರ್ಮಗಳ ಮನನಮಾಡು

ವುದಕ್ಕೂ, ಏಳನೆಯದು ರಾಜಕಾರ್ಯಪದ್ಧತಿಗಳನ್ನು ನಿರ್ಣಯಿಸಿಕೊಂಡು ಚಾರರನ್ನು ನಿಯೋಗಿಸುವುದಕ್ಕೂ ಎಂಟನೆಯದು ಆಚಾರ್ಯರನ್ನೂ ಗುರುಗಳನ್ನೂ ಜ್ಯೌತಿಷಿಕರನ್ನೂ ವೈದ್ಯರನ್ನೂ ನೋಡಿ, ಅವರ ಆಶೀರ್ವಾದಗಳನ್ನು ಹೊಂದುವುದಕ್ಕೂ ವಿನಿಯೋಗಿಸಲ್ಪಡುತ್ತಿದ್ದಿತು.

ಈ ವಿಧವಾಗಿ ರಾಜನ ದಿನಚರ್ಯೆಯು ನಿರ್ಣೀತವಾಗಿದ್ದಿತು. ವಿಶೇಷ ಕಾರ್ಯವಿದ್ದಾಗ ರಾಜನು ಈ ಕಾಲಕ್ರಮವನ್ನು ಬದಲಾಯಿಸಿಕೊಳ್ಳುತ್ತಿದ್ದನೆಂಬುವಕ್ಕೆ ಸಂದೇಹವಿಲ್ಲದಿದ್ದರೂ, ಸರ್ವಸಾಧಾರಣವಾಗಿ ಈ ಕ್ರಮವೇ ಆತನಿಂದ ಅನುಸರಿಸಲ್ಪಟ್ಟಿದ್ದಿತು.

"ಮಾಡತಕ್ಕ ಕಾರ್ಯಕ್ಕೆ ಯಾವಾಗಲೂ ಸಿದ್ಧನಾಗಿರುವುದೇ ರಾಜನಿಗೆ ವ್ರತವು. ಧರ್ಮವನ್ನು ಚೆನ್ನಾಗಿ ನೆರವೇರಿಸುವುದೇ ಯಜ್ಞಕರ್ಮವು. ಎಲ್ಲರಲ್ಲಿಯೂ ಸಮಭಾವದಿಂದ ಪ್ರವರ್ತಿಸುವುದೇ ಆತನಿಗೆ ಅವಭೃಥಸ್ನಾನವು."

"ಪ್ರಜೆಗಳ ಸೌಖ್ಯವೇ ಆತನ ಸೌಖ್ಯವು. ಅವರ ಕ್ಷೇಮವೇ ಆತನ ಕ್ಷೇಮವು. ತನಗೆ ಪ್ರೀತಿಕರವಾದುದು ಪ್ರೀತಿಕರವೆಂಬುದಾಗಿ ಆತನು ಭಾವಿಸಬಾರದು. ಪ್ರಜೆಗಳಿಗೆ ಪ್ರೀತಿಕರವಾದುದೇ ನಿಶ್ಚಯವಾಗಿಯೂ ಪ್ರೀತಿಕರವೆಂದು ಆತನು ತಿಳಿಯಬೇಕು."

"ರಾಜನು ಯಾವಾಗಲೂ ಅಪ್ರಮತ್ತನಾಗಿ ಧರ್ಮಗಳನ್ನು ನೆರವೇರಿಸಬೇಕು. ಅಪ್ರಮತ್ತತೆಯೇ ಐಶ್ವರ್ಯಕ್ಕೆ ಮೂಲವು. ಅದರ ವ್ಯತಿರೇಕವೇ ದುಃಖಕ್ಕೆ ತಳಹದಿಯು."

ಎಂಬ ಈ ಸೂತ್ರಗಳು ಚಂದ್ರಗುಪ್ತನ ಜೀವಯಾತ್ರೆಗೆ ಮೂಲಾಧಾರಗಳು. ಆದುದರಿಂದಲೇ ರಾಮನಂತೆ:—

ತಂದೆಯ ವೋಲ್ ಧರಣೀಶಂ |
ತಂದೆಯ ನೆನೆಹುಳಿಯದಂತೆ ಜನರಂ ಪೊರೆಯಲ್ ||
ತಂದೆಯನನಿಬರ್ ಮರೆತರ್ |
ತಂದೆಯಲಾ ! ಚಂದ್ರಗುಪ್ತ ಧರಣಿಪನೆನುತಂ ||



# ಒಂಭತ್ತನೆಯ ಪ್ರಕರಣವು.

## ಕೆಲವು ಆಚಾರಗಳು.



### ಪ್ರೌಢಾ ವಿವಾಹ.

ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಶಿಕ್ಷಾಸ್ಮೃತಿಯನ್ನು ಬರೆಯುತ್ತ, ರಜಸ್ವಲಾನಂತರ ಕನ್ಯೆಯರಲ್ಲಿ ದ್ರೋಹಬುದ್ಧಿ ತೋರಿಸುವವರಿಗೆ ಒಂದು ವಿಧವಾದ ದಂಡನೆಯನ್ನು ವಿಧಿಸುವನು. ಒಂದುವೇಳೆ ಕನ್ಯೆಯು ರಜಸ್ವಲೆಯಾಗಿ ಏಳು ತಿಂಗಳು ಸಂದಲ್ಲಿ ಆಕೆಯ ಕೃಪೆಗೆ ಪಾತ್ರನಾಗುವುದು ತಪ್ಪಲ್ಲವೆಂದು ವಿಧಿಸುವನು. ರಜಸ್ವಲೆಯಾದನಂತರ ಮೂರು ವರ್ಷಗಳು ಅವಿವಾಹಿತೆಯಾಗಿರುವ ಕನ್ಯೆಯನ್ನು ಸಮಾನವಾದ ಜಾತಿಯ ಪುರುಷನು ಅನುಭವಿಸಬಹುದು. ಮೂರು ಸಂವತ್ಸರಗಳಿಗೂ ಮೇಲಾಗಿದ್ದಲ್ಲಿ, ತಂದೆಗೆ ಸೇರಬೇಕಾದ ವಿಭೂಷಣಗಳನ್ನು ಆ ಕನ್ಯೆಯು ಸ್ವಾಧೀನದಲ್ಲಿಟ್ಟುಕೊಳ್ಳದಿದ್ದಲ್ಲ ಆಕೆಯನ್ನು ವಿಜಾತೀಯನಾದರೂ ಅನುಭವಿಸಬಹುದು. ಶುದ್ಧಚರಿತ್ರೆಯಿಲ್ಲದ ಕನ್ಯೆಯೆಂದು ಕನ್ಯಾಸ್ವೀಕಾರಮಾಡಿಕೊಂಡಮೇಲೆ ಗೊತ್ತಾದಲ್ಲಿ, ಅಂತಹ ಕನ್ಯೆಯನ್ನು ತ್ಯಜಿಸಬಹುದೆಂದು ಮತ್ತೊಂದು ಕಡೆಯಲ್ಲಿ ಬರೆಯಲ್ಪಟ್ಟಿದೆ. ಅಂತಹ ಸಂದರ್ಭಗಳಲ್ಲಿ ಶುಲ್ಕವನ್ನೂ ಸ್ತ್ರೀಧನವನ್ನೂ ವರನಿಗೆ ಕೊಟ್ಟುಬಿಡಬೇಕೆಂತಲೂ ಕನ್ಯಾದಾತನು ದಂಡಕ್ಕೆ ಗುರಿಯಾಗಬೇಕೆಂತಲೂ ಶಾಸಿಸಲ್ಪಟ್ಟಿದೆ. ಶುಲ್ಕವನ್ನುಕುರಿತು ಬರೆಯುತ್ತ, ಇನ್ನೊಂದು ಕಡೆಯಲ್ಲಿ ಚಾಣಕ್ಯನು, ತಂದೆತಾಯ್ಗಳಿಬ್ಬರೂ ಪರಲೋಕವಾಸಿಗಳಾಗಿದ್ದಪಕ್ಷದಲ್ಲಿ ಕನ್ಯೆಯೇ ಶುಲ್ಕ* ಸ್ವೀಕಾರವನ್ನು ಮಾಡಬಹುದೆಂದು ನಿರ್ಣಯಿಸಿರುವನು. ವ್ಯಾಖ್ಯಾನಗಳು ಅಗತ್ಯವಿಲ್ಲದೆಯೇ ಮೇಲಿನ ವಿಷಯಗಳು ಚಂದ್ರಗುಪ್ತನ ಕಾಲದಲ್ಲಿ ಪ್ರೌಢಾವಿವಾಹಗಳು ಸಾಧಾರಣವಾಗಿದ್ದುವೆಂದು ಹೇಳುತ್ತಿವೆ. ರಜಸ್ವಲಾನಂತರದ ವಿವಾಹಗಳು ಸಾಧಾರಣವಾಗಿದ್ದುವೆಂಬುದು ಸಿದ್ಧಾಂತವಾದ ಮೇಲೆ, ಹುಡುಗರಿಗಾಗಲಿ, ಹುಡುಗಿಯರಿಗಾಗಲಿ "ಅತಿಬಾಲ್ಯವಿವಾಹಗಳು" ಎಂಬ ಅನುಚಿತ ಶೃಂಖಲಾಬಂಧನವು ಇರುತ್ತಿರಲಿಲ್ಲವೆಂದು ಬೇರೆಯಾಗಿ ಬರೆಯಬೇಕೇ?



* ಈ ಶುಲ್ಕವೆಂಬುದು ಈಗಿನ ಕನ್ಯಾಶುಲ್ಕವೆಂದು ತಿಳಿಯಲಾಗದು. ಆಪತ್ಕಾಲದಲ್ಲಿ ಸ್ತ್ರೀಯರಿಗೆ ಉಪಯೋಗವಾಗುವುದಕ್ಕೆ ವಿವಾಹಸಮಯದಲ್ಲಿ ವರನು ಕೊಡುವ ದ್ರವ್ಯರೂಪವಾದ

## ಪುನರ್ವಿವಾಹಗಳು.

"ಹೆಂಡತಿಯಿಂದ ಪುರುಷರಿಗೆ ಸಜೀವಸಂತಾನವಾಗಲೀ ಗಂಡುಮಕ್ಕಳಾಗಲೀ ಆಗದಿದ್ದರೂ, ಅಥವಾ ಸಂತಾನವೇ ಇಲ್ಲದೆಹೋದರೂ, ಆತನು ಮತ್ತೊಬ್ಬಳನ್ನು ಮದುವೆಯಾಗುವುದಕ್ಕೆ ಎಂಟುವರ್ಷಗಳಾಗಬೇಕು. ಹೆಂಡತಿಯು ಮೃತಶಿಶುವನ್ನು ಹೆತ್ತರೆ, ಹತ್ತುವರ್ಷ ವ್ಯವಧಿಯಾಗಬೇಕು; ಆಕೆ ಹೆಣ್ಣುಮಕ್ಕಳನ್ನೇ ಹೆರುತ್ತಿದ್ದಲ್ಲಿ ಹನ್ನೆರಡು ವರ್ಷಗಳು ನೋಡಬೇಕು; ಆಮೇಲೆ ಪುತ್ರರಾಗಬೇಕೆಂಬ ವಾಂಛೆಯುಂಟಾದಲ್ಲಿ, ಆತನು ಮತ್ತೊಬ್ಬ ಸ್ತ್ರೀಯನ್ನು ವಿವಾಹವಾಗಬಹುದು. ಈ ನಿಯಮಗಳನ್ನು ತಿರಸ್ಕರಿಸುವವನು ಹೆಂಡತಿಗೆ ಸ್ತ್ರೀಧನವನ್ನೂ ಶುಲ್ಕವನ್ನೂ ಕೊಟ್ಟುಬಿಟ್ಟು, ಇನ್ನೂ ಅಧಿಕವಾಗಿ ಧನವಿತ್ತು, ಪ್ರಭುತ್ವದವರಿಗೂ ಸ್ವಲ್ಪ ದಂಡವನ್ನು ಕೊಡಬೇಕು. ವಿವಾಹಕಾಲದಲ್ಲಿ ಶುಲ್ಕಾದಿಗಳನ್ನು ಸ್ವೀಕರಿಸದವರಿಗೆ ಕೂಡ, ಈ ವಿಧವಾಗಿ ಶುಲ್ಕಾದಿಗಳನ್ನು ಕೊಟ್ಟು ತಕ್ಕರೀತಿಯಿಂಧ ವೃತ್ತಿಯುಂಟುಮಾಡಿ, ಪುರುಷನು ಪುತ್ರಕಾಮನಾಗಿ ಎಷ್ಟುಮಂದಿ ಸ್ತ್ರೀಯರನ್ನಾದರೂ ವಿವಾಹಮಾಡಿಕೊಳ್ಳಬಹುದು. "ಸ್ತ್ರೀಯರು ಪುತ್ರರನ್ನು ಪಡೆವುದಕ್ಕೆ ಸೃಷ್ಟಿಸಲ್ಪಟ್ಟವರು" ಎಂಬ ವಾಕ್ಯವು ಅರ್ಥಶಾಸ್ತ್ರದಲ್ಲಿ ಕಂಡುಬರುವುದರಿಂದ ಚಂದ್ರಗುಪ್ತ ಚಕ್ರವರ್ತಿಯ ಕಾಲದಲ್ಲಿ ಪುರುಷನು ಎಷ್ಟುಮಂದಿ ಹೆಂಡಿರನ್ನಾದರೂ ಮದುವೆಯಾಗುವುದಕ್ಕೆ ಸ್ವಾತಂತ್ರ್ಯವುಳ್ಳವನಾಗಿದ್ದನೆಂಬುದು ವಿಶದವಾಗುತ್ತಿದೆ.

ಇನ್ನು ಸ್ತ್ರೀ ಪುನರ್ವಿವಾಹಗಳನ್ನು ಕುರಿತು ಯೋಚಿಸಿದಲ್ಲಿ:—

"ಗಂಡನು ಗತಿಸಿದಮೇಲೆ ಭಾರ್ಯೆಯು ಧರ್ಮಕಾಮಳಾಗಿ ಜೀವಿಸಲು ಯೋಚಿಸಿದಲ್ಲಿ, ಅವಳ ಸ್ತ್ರಿಧನವನ್ನೂ ಶುಲ್ಕವನ್ನೂ ಆಕೆಗೆ ಕೊಟ್ಟುಬಿಡಬೇಕು. ಹೆಸರಿಗೆ ಮಾತ್ರ ಆಕೆಗೆ ಕೊಡಲ್ಪಟ್ಟದ್ದು, ನಿಶ್ಚಯವಾಗಿಯೂ ಅವು ಆಕೆಯ ಸ್ವಾಧೀನವಿಲ್ಲದಲ್ಲಿ, ಅವುಗಳಿಗಾಗುವ ಬಡ್ಡಿಯೊಡನೆ ಕೂಡ ಅವನ್ನು ಸಲ್ಲಿಸಿಬಿಡಬೇಕು."

---

ಆಸ್ತಿಗೆ ಶುಲ್ಕವೆಂದು ಹೆಸರು. ಆಭರಣರೂಪವಾಗಿ ಕೊಡುವ ಆಸ್ತಿಗೂ ವೃತ್ತಿರೂಪವಾಗಿ ಕೊಡುವ ಆಸ್ತಿಗೂ ಸ್ತ್ರೀಧನವೆಂದು ಹೆಸರು. ಶುಲ್ಕಕ್ಕೂ ಸ್ತ್ರೀಧನಕ್ಕೂ, ಹೆಂಡತಿಯು ಪೂರ್ಣಸ್ವತಂತ್ರಳು. ದುರ್ಭಿಕ್ಷದಲ್ಲಿಯೂ, ದಾನಧರ್ಮಕ್ಕೂ, ರೋಗನಿವಾರಣೆಗೂ, ಆಪತ್ಸಮಯಗಳಲ್ಲಿಯೂ, ಈ ಶುಲ್ಕವನ್ನೂ ಸ್ತ್ರೀಧನವನ್ನೂ ವಿನಿಯೋಗಿಸಿಕೊಳ್ಳುವುದಕ್ಕೆ ಸ್ವಲ್ಪಮಟ್ಟಿಗೆ ಗಂಡಸಿಗೂ ಸ್ವಾತಂತ್ರ್ಯವಿದ್ದಿತು. ಈಗಲೂ ಶುಲ್ಕಚ್ಛಾಯೆಯು ಅಲ್ಲಲ್ಲಿ ಕಂಡುಬರುವುದು. ಆದರೆ ಈ ವಿಷಯವನ್ನು ಇನ್ನೂ ಶೋಧಿಸಬೇಕಾಗಿದೆ.

“ಆಕೆಯು ಕುಟುಂಬಕಾಮಳಾಗಿ ಪುನರ್ವಿವಾಹವನ್ನು ಆಶಿಸಿದಲ್ಲಿ, ಆಕೆಗೆ ಗಂಡನಾಗಲೀ ಮಾವನಾಗಲೀ ಕೊಟ್ಟ ವಸ್ತುಗಳನ್ನು ಕೊಟ್ಟುಬಿಡಬೇಕು.” ಎಂದೂ,

“ಭರ್ತನು ಹ್ರಸ್ವಪ್ರವಾಸಕ್ಕೆ ಹೋಗಿದ್ದಲ್ಲಿ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಸ್ತ್ರೀಯರು ಆತನಿಗಾಗಿ ಒಂದುವರ್ಷ ಕಾದಿರಬೇಕು. ಸಂತಾನವಿದ್ದವರಾದ ಪಕ್ಷದಲ್ಲಿ, ಒಂದುವರ್ಷಕ್ಕಿಂತಲೂ ಹೆಚ್ಚಾಗಿ ಕಾದಿರಬೇಕು. ಭೋಜನಾದಿಗಳಿಗೆ ವಸತಿಯಿದ್ದಲ್ಲಿ ಎರಡರಷ್ಟುಕಾಲ ವಿಯೋಗವನ್ನು ತಾಳಿರಬೇಕು. ಊಟಕ್ಕೆ ಗತಿಯಿಲ್ಲದ ಸ್ತ್ರೀಯರನ್ನು ಜ್ಞಾತಿಗಳು, ನಾಲ್ಕು, ಅಥವಾ ಎಂಟು ವರ್ಷಗಳ ಕಾಲ ರಕ್ಷಿಸಬೇಕು. ಆಬಳಿಕ ವಿವಾಹಕಾಲದಲ್ಲಿ ಅವರಿಗೆ ಕೊಡಲ್ಪಟ್ಟ ಆಸ್ತಿಯನ್ನು ಕೊಟ್ಟು ಪುನರ್ವಿವಾಹಮಾಡಿಕೊಳ್ಳಲು ಸಮ್ಮತಿಸಬೇಕು.

“ಗಂಡನು ಬ್ರಾಹ್ಮಣನಾಗಿದ್ದು ಅಧ್ಯಯನಾರ್ಥವಾಗಿ ದೇಶಾಂತರಸ್ಥನಾಗಿದ್ದರೆ, ಸಂತಾನರಹಿತೆಯಾದ ಸ್ತ್ರೀಯು ಹತ್ತುವರ್ಷ ಕಾಲ, ಆತನಿಗಾಗಿ ಕಾದಿರಬೇಕು. ಸಂತಾನವತಿಯಾಗಿದ್ದಪಕ್ಷದಲ್ಲಿ ಹನ್ನೆರಡು ವರ್ಷ ಕಳೆಯಬೇಕು.”

“ಗಂಡನು ಕ್ಷತ್ರಿಯನಾಗಿದ್ದಲ್ಲಿ ಹೆಂಡತಿಯು ಪ್ರಾಣವಿರುವ ವರೆಗೂ ಕಾದಿರಬೇಕು. ಆದರೆ ವಂಶವಿಚ್ಛಿನ್ನವನ್ನು ತೊಲಗಿಸುವುದಕ್ಕಾಗಿ, ಸವರ್ಣನಾದ ಎರಡನೆಯ ಗಂಡನನ್ನು ಸ್ವೀಕರಿಸಿದರೂ, ಅಪವಾದವನ್ನು ಹೊಂದಳು.”

“ಗಂಡನು ದೀರ್ಘಪ್ರವಾಸಕ್ಕೆ ಹೋದರೂ, ಸನ್ಯಾಸಿಯಾದರೂ, ಮೃತಿ ಹೊಂದಿದರೂ, ಸಂತಾನವಿರಹಿತೆಯಾದ ಹೆಂಡತಿಯು ಏಳು ತಿಂಗಳು ಕಾದಿರಬೇಕು. ಸಂತಾನಸಮೇತಳಾಗಿದ್ದ ಪಕ್ಷದಲ್ಲಿ ಒಂದುವರ್ಷ ಕಾದಿರಬೇಕು. ಈ ಕಾಲಪರಿಮಿತಿ ದಾಟಿದಮೇಲೆ ಸ್ತ್ರೀಯು ತನ್ನ ಗಂಡನ ಕನಿಷ್ಠಸೋದರನನ್ನಾಗಲೀ, ತನ್ನ ಗಂಡನ ಗೋತ್ರದವನನ್ನಾಗಲೀ ಪುನರುದ್ವಾಹದಲ್ಲಿ ಸ್ವೀಕರಿಸಬಹುದು.”

ಎಂದು ಅರ್ಥಶಾಸ್ತ್ರವು ಹೇಳುವುದರಿಂದ ಪುರುಷರಂತೆಯೇ ಸ್ತ್ರೀಯರಿಗೂ ಚಂದ್ರಗುಪ್ತನ ಕಾಲದಲ್ಲಿ, ಪುನರ್ವಿವಾಹವಿಷಯದಲ್ಲಿ ಸ್ವಾತಂತ್ರ್ಯವಿದ್ದಿತೆಂದು ಗೊತ್ತಾಗುತ್ತಿದೆ.



## ದಾಂಪತ್ಯ ವಿಮೋಚನವು.

ಚಂದ್ರಗುಪ್ತನ ಕಾಲದಲ್ಲಿ, ನಾವೀಗ ನಮ್ಮದೇಶದಲ್ಲಿ ಕೇಳದಿರುವ ಒಂದು ಆಚಾರವಿದ್ದಿತು. ಆ ಆಚಾರವು ದಾಂಪತ್ಯ ವಿಮೋಚನವು. ಭಾರ್ಯಾಭರ್ತೃರು ಪರಸ್ಪರ ಸ್ನೇಹಭಾವದಿಂದ ಇರದೆ ಹೋದಲ್ಲಿ ವಿಧ್ಯುಕ್ತವಾಗಿ ನಡೆದ ವಿವಾಹವಾದರೂ ನಿರ್ಬಂಧವಲ್ಲವೆಂದು ಈ ಆಚಾರದ ಮುಖ್ಯ ಪ್ರಯೋಜನವು. ಇಂತಹ ಆಚಾರವು ಈಗ ವಿಶೇಷವಾಗಿ ಪಾಶ್ಚಾತ್ಯದೇಶಗಳಲ್ಲಿ ಪ್ರಬಲವಾಗಿದೆ; ಅಮೆರಿಕಾ ರಾಷ್ಟ್ರದಲ್ಲಿ ಮಿತಿಮಿಾರಿ ಹೋಗಿದೆ; ಸ್ವಲ್ಪದ ಮಾತಿಗಾಗಿ ಗಂಡಹೆಂಡಿಂದಿರು ನ್ಯಾಯಸ್ಥಾನಗಳನ್ನೇರಿ ಒಬ್ಬರಮೇಲೊಬ್ಬರು ಅಭಿಯೋಗಗಳನ್ನು ತಂದು ವಿವಾಹಸಂಬಂಧಗಳನ್ನು ಹರಿದು ಬಿಡುತ್ತಿರುವರು. ಇಂತಹ ಅನರ್ಥಗಳಿಗೆ ಮೂಲವಾದ ಈ ಆಚಾರವು ಅನೇಕರಿಂದ ಖಂಡಿಸಲ್ಪಡುತ್ತಿದೆ. ಆದರೂ ಈ ಅಚಾರವು ಎಷ್ಟರಮಟ್ಟಿಗೆ ಚಂದ್ರಗುಪ್ತನ ಕಾಲದಲ್ಲಿ ವ್ಯವಹಾರದಲ್ಲಿದ್ದಿತೆಂದು ಕಂಡುಕೊಂಡಲ್ಲಿ, ವ್ಯತ್ಯಾಸವು ಗೊತ್ತಾಗುವುದು. ಗಂಡನ ಮೇಲೆ ದ್ವೇಷವುಳ್ಳ ಸ್ತ್ರೀಯು ಏಳು ತಿಂಗಳ ಪರ್ಯಂತ ಅಲಂಕಾರಾದಿಗಳನ್ನು ಮಾಡಿಕೊಳ್ಳದೆ ಕಾಲಕಳೆಯಬೇಕು. ಆಮೇಲೆ ತನಗೆ ಗಂಡನು ಕೊಟ್ಟ ಆಭರಣಗಳನ್ನೂ ಶುಲ್ಕವನ್ನೂ ಸಂಪೂರ್ಣವಾಗಿ ಆತನ ಸ್ವಾಧೀನಮಾಡಿ, ಆತನಿಗೆ ಮತ್ತೊಂದು ಭಾರ್ಯೆಯನ್ನು ಸ್ವೀಕರಿಸಲು ಅನುಮತಿಯನ್ನು ಕೊಡಬೇಕು. ಗಂಡನು ಹೆಂಡತಿಯಮೇಲೆ ದ್ವೇಷವುಳ್ಳವನಾಗಿದ್ದಲ್ಲಿ, ಹೆಂಡತಿಯನ್ನು ಭಿಕ್ಷುಕರ (ವೈರಾಗ್ಯವಂತರಾದ ಸ್ತ್ರೀಯರ) ಮನೆಯಲ್ಲಿ ಅಥವಾ ಬಂಧುಗಳ ಮನೆಯಲ್ಲಿ, ಅಥವಾ ಪೋಷಕರ ಮನೆಯಲ್ಲಿ ಶರಣು ಹೊಂದಲು ಅನುಜ್ಞೆಕೊಡಬೇಕು. ಗಂಡನು ತನ್ನ ಹೆಂಡತಿಯ ಮೇಲೆ ಅನ್ಯಾಯವಾಗಿ ದೂರುಹೊರಿಸಿ ಪ್ರತ್ಯಕ್ಷ ಸಾಕ್ಷಿಗಳಿಂದ ನಿರ್ಧಾರವಾಗಲಾರದ ದುಷ್ಕಾರ್ಯಗಳನ್ನು ಆರೋಪಿಸಿದಲ್ಲಿ, ಅವನು ಹನ್ನೆರಡು ಹಣಗಳ ಅಪರಾಧವನ್ನು ಕೊಡಬೇಕಾಗಿದ್ದಿತು. ಹೆಂಡತಿಯು ಗಂಡನಲ್ಲಿ ದ್ವೇಷವುಳ್ಳವಳಾಗಿದ್ದರೂ, ಆತನ ಇಷ್ಟವಿಲ್ಲದೆ ವಿವಾಹಬಂಧದಿಂದ ಹರಿದುಕೊಳ್ಳಕೂಡದು. ಆದರೆ ಪರಸ್ಪರ ದ್ವೇಷವಿದ್ದಲ್ಲಿ ದಾಂಪತ್ಯವಿಮೋಚನವನ್ನು ಕಲ್ಪಿಸಿಕೊಳ್ಳಬಹುದು. ಗಂಡನು ಹೆಂಡತಿಯಿಂದ ಅಪಾಯವುಂಟಾಗುವುದೆಂಬ ಭಯಹೊಂದಿ, ಆ ಭಯಾತಿಶಯದಿಂದಲೇ ವಿಮೋಚನವನ್ನು ಕೋರುವ ಪಕ್ಷದಲ್ಲಿ, ಆಕೆಗೆ ಸೇರತಕ್ಕ ಸರ್ವಸ್ವವನ್ನೂ ಆತನು ಕೊಟ್ಟುಬಿಡಬೇಕು. ಹೆಂಡತಿಯು ಗಂಡನಿಂದ ತನಗೆ ಅಪಾಯವುಂಟಾಗಬಹುದೆಂದು ಹೆದರಿ, ಆ ಅಪಾಯದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ವಿಮೋಚನೆಯನ್ನು ಆಶಿಸಿದಲ್ಲಿ, ಆಕೆಯು ಆವ ವಿಧವಾದ ಧನಕ್ಕಾಗಲೀ ಆಸ್ತಿಗಾಗಲೀ ಅರ್ಹಳಲ್ಲ.

ಈ ದಾಂಪತ್ಯ ವಿಮೋಚನಾಚಾರವು ಮೊದಲು ನಾಲ್ಕು ವಿಧವಾದ ವಿವಾಹಗಳಿಗೆ ನಿಷೇಧಿಸಲ್ಪಟ್ಟಿದೆ. ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ—ಎಂಬಿವು ಈ ನಾಲ್ಕು ವಿಧವಾದುವುಗಳು. ಸಾಲಂಕಾರ ಕನ್ಯಾದಾನಕ್ಕೆ ಬ್ರಾಹ್ಮವೆಂದು ಹೆಸರು1. ಶುಲ್ಕಾದಿವಿರಹಿತವಾದ ಕನ್ಯಾದಾನಕ್ಕೆ ಪ್ರಾಜಾಪತ್ಯವೆಂದು ಹೆಸರು2. ಒಂದೂ ಇಲ್ಲವೆ ಎರಡು ಜತೆ ಆಕಳುಗಳನ್ನು ತೆಗೆದುಕೊಂಡು ಕನ್ಯೆಯನ್ನು ಕೊಡುವುದು ಆರ್ಷವೆಂದೆನ್ನಿಸುವುದು3. ಯಜ್ಞದಲ್ಲಿ ಋತ್ವಿಜನಿಗೆ ಕನ್ಯಾದಾನ ಮಾಡುವುದು ದೈವವು4. ರಜಸ್ವಲಾನಂತರದ ವಿವಾಹಗಳು ಸಾಮಾನ್ಯವಾಗಿದ್ದುದರಿಂದ ಈ ನಾಲ್ಕು ವಿಧವಾದ ವಿವಾಹಗಳಲ್ಲಿಯೂ, ಕನ್ಯೆಯೂ ಕನ್ಯೆಯ ತಂದೆತಾಯ್ಗಳೂ ಅವರವರ ಸ್ವಾತಂತ್ರ್ಯವನ್ನು ಉಪಯೋಗಿಸಿ ತಮ್ಮಲ್ಲ ತಾವಾಲೋಚಿಸಿ, ವಧೂವರರಿಗೆ ಸೌಖ್ಯಾವಹವಾದ ರೀತಿಯಿಂದ ವಿವಾಹಗಳನ್ನು ನಡೆಯಿಸಲು ಸಾಧ್ಯವಾಗುತ್ತಿದ್ದಿತು. ಈ ವಿವಾಹಗಳು ಹೀಗೆ ಆಲೋಚಸಲ್ಪಟ್ಟು, ಲೋಭಾದಿ ದುರ್ಗುಣ ವ್ಯಾಪಾರ ವಿದೂರಗಳಾಗುವುದರಿಂದ ಇವುಗಳ ವಿಷಯದಲ್ಲಿ ವಿಮೋಚನವಿಧಿಯು ಆವಶ್ಯಕವಾಗಿರಲಿಲ್ಲ. ಈಗಲಿನ್ನು ಮಿಕ್ಕ ವಿವಾಹಗಳನ್ನು ಕುರಿತು ಯೋಚಿಸುವ.

ಗಾಂಧರ್ವವಿವಾಹ:—ಇದು ಕನ್ಯಾಪುರುಷರೊಬ್ಬರೊಬ್ಬರನ್ನು ನೋಡಿ ಮೆಚ್ಚಿಕೊಂಡಮಾತ್ರಕ್ಕೆ ಮದುವೆಯಾಗುವುದು(1). ಇಂತಹ ವಿವಾಹಗಳು ಭ್ರಮೆಗೆ ಆಸ್ಪದವಲ್ಲವೇ? ಕೇಳಿಕೆಯ ಮಾತುಗಳಿಂದಲೂ, ಆಕಸ್ಮಿಕ ದರ್ಶನದಿಂದಲೂ, ಒಬ್ಬರನ್ನೊಬ್ಬರು ಪ್ರೇಮಿಸಿದಲ್ಲಿ, ಆ ಪ್ರೇಮವು ಕೆಲವು ಸಂದರ್ಭಗಳಲ್ಲಿ ಕ್ರಮಕ್ರವಾಗಿ ಕ್ಷೀಣಿಸಿ ಅದರ ಸ್ಥಾನದಲ್ಲಿ ಅಸಹ್ಯತೆಯುಂಟಾಗುವುದು ಸರ್ವಜನ ವಿದಿತವು. ಅಂತಹ ಸಂದರ್ಭಗಳಲ್ಲಿ ಬಂಧವಿಮೋಚನಕ್ಕೆ ಮಾರ್ಗವಿಲ್ಲದೆ ಹೋದರೆ ಅನರ್ಥಗಳುಂಟಾಗುವುವಲ್ಲವೇ!

ಆಸುರ(2):—ಈ ವಿಧವಾದ ಮದುವೆಗಳು ಈ ಹೊತ್ತಿಗೂ ನಮ್ಮ ದೇಶದಲ್ಲಿ ಕಾಣಬರುತ್ತ ನಮ್ಮ ಸಂಘಾಭಿವೃದ್ಧಿಗೆ ಬೇರುಹುಳುಗಳಾಗಿ ಪರಿಣಮಿಸುತ್ತಿ

1. ಬ್ರಾಹ್ಮೋವಿವಾಹ ಆಹೂಯದೀಯತೇ ಶಕ್ತ್ಯಲಂಕೃತಾ(ಯಾಜ್ಞವಲ್ಕ್ಯ 1-58.)
2. ಸಹೋಭೌಚರತಾಂ ಧರ್ಮಮಿತಿ ವಾಚಾನುಭಾಷ್ಯ ಚ ಕನ್ಯಾಪ್ರದಾ।
ನಮಭ್ಯರ್ಚ್ಯಂ ಪ್ರಾಜಾಪತ್ಯೋ ವಿಧಿಸ್ಮೃತಃ (ಮನುಸ್ಮೃತಿ 3:30)
3. ಆದಾಯಾರ್ಷಸ್ತು ಗೋದ್ವಯಂ—ಯಾಜ್ಞವಲ್ಕ್ಯ 1-59.
4. ಯಜ್ಞಸ್ಯ ಋತ್ವಿಜೇ ದೈವಃ— ,, ,,

(1) ಗಾಂಧರ್ವಃ ಸಮಯಾನ್ಮಿಥಃ—ಯಾಜ್ಞವಲ್ಕ್ಯ 1-61.
(2) ಆಸುರೋ ದ್ರವಿಣಾದಾನಾತ್—ಯಾಜ್ಞವಲ್ಕ್ಯ 1-61; ಮನುಸ್ಮೃತಿ 3-33.

ರುವುವು. ಧನಾಶಾ ಪಿಶಾಚದ ಪೀಡೆಯಿಂದ ಕನ್ಯಾಶುಲ್ಕವನ್ನು ತೆಗೆದುಕೊಂಡು ತಾಯ್ತಂದೆಗಳು ಮಾಂಸವಿಕ್ರಯವೆಂದಾದರೂ ಹಿಂದೆಗೆಯದೆ, ತಾವು ಹೊಟ್ಟೆಯೊರ ಹೆತ್ತ ಮಕ್ಕಳನ್ನು ಮಾರಿಬಿಡುವುದನ್ನು ಕೂಡ ನಮ್ಮ ಧರ್ಮಕರ್ತರು ಒಂದು ವಿಧವಾದ ಮದುವೆಯೆಂದು ವರ್ಣಿಸದೆ ಬಿಡದಿದ್ದುದಕ್ಕೆ ನಾವೆಷ್ಟೋ ಚಿಂತಿಸಬೇಕಾಗಿದೆ. ಅದರೆ ಅವರಿಟ್ಟ ಹೆಸರು ಮಾತ್ರ, ಈ ವಿವಾಹಗಳನ್ನು ಎಷ್ಟರವರೆಗೆ ಖಂಡಿಸಬೇಕೋ ಅಷ್ಟರ ವರೆಗೂ ಖಂಡಿಸುತ್ತಿರುವುದು. ಇಂತಹ ದುಷ್ಟವಾದ ವಿವಾಹಕ್ಕೆ ವಿಮೋಚನೆಯು ಆವಶ್ಯಕವೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಕುಲಗೋತ್ರಗಳನ್ನೂ, ಸ್ಥಿತಿಗತಿಗಳನ್ನೂ, ರೂಪಾರೂಪಗಳನ್ನೂ, ಆರೋಗ್ಯಾನಾರೋಗ್ಯಗಳನ್ನೂ, ಯೌವನವೃದ್ಧಾಪ್ಯಗಳನ್ನೂ, ಯೋಗ್ಯತಾಯೋಗ್ಯತೆಗಳನ್ನೂ ವಿಚಾರಿಸದೆ, ಗಂಡನನ್ನು ಕೊರಳಿಗೆ ಕಟ್ಟಿದರೆ, ಮತ್ತು ಆತನು ದುರ್ಮಾರ್ಗನೋ ಷಂಡನೋ ಆಗಿದ್ದಲ್ಲಿ ಹೆಂಡತಿಯು ಏನು ಮಾಡಬೇಕು? ಆತನನ್ನು ಪರಿತ್ಯಜಿಸಲೇ ಬೇಕಲ್ಲವೇ? ಈ ಕನ್ಯಾಶುಲ್ಕವೆಂಬ ದುರಾಚಾರದ ದುಷ್ಫಲವನ್ನು ನಿಲ್ಲಿಸುವುದಕ್ಕೆ ಈಗ ನಮ್ಮ ದೇಶದಲ್ಲಿ ದಾಂಪತ್ಯವಿಮೋಚನಸ್ಮೃತಿಯೊಂದು ಚಂದ್ರಗುಪ್ತನ ಕಾಲದಲ್ಲಿದ್ದಂತೆಯೇ ಕಲ್ಪಿತವಾದಲ್ಲಿ ಶ್ರೇಯೋದಾಯಕವಾಗಬಹುದೆಂದು ತೋರುವುದು.

ರಾಕ್ಷಸ:—ಯುದ್ಧದಲ್ಲಿ ಕನ್ಯೆಯ ಬಂಧುಗಳೊಡನೆ ಹೋರಾಡಿ ಬಲಾತ್ಕಾರದಿಂದ ಕನ್ಯೆಯನ್ನೆತ್ತಿಕೊಂಡು ಹೋಗುವುದಕ್ಕೆ ರಾಕ್ಷಸವೆಂದು ಹೆಸರು×. ರುಕ್ಮಿಣೀ ಕೃಷ್ಣರ ವಿವಾಹವು ಈತೆರನಾದುದು. ಪೂರ್ವಕಾಲದಲ್ಲಿ ಈ ವಿಧವಾದ ವಿವಾಹಗಳಲ್ಲಿ ಕನ್ಯಾಪುರುಷರಿಗೆ ಪರಸ್ಪರಾನುರಾಗವಿದ್ದುದು ವಿಸ್ಪಷ್ಟವಾಗಿ ಕಂಡುಬರುತ್ತಿರುವುದು. ಅದು ಇದ್ದರೂ, ಗಾಂಧರ್ವ ವಿವಾಹದೊಡನೆ ಇದೂ ಸಾಮ್ಯವುಳ್ಳುದಾದುದರಿಂದ, ಇಲ್ಲಿಯೂ ಭ್ರಮಾದಿಗಳಿಗೆ ಆಸ್ಪದವಿದೆ. ಒಂದುವೇಳೆ ಇಲ್ಲಿ ಕನ್ಯೆಗೆ ಅನುರಾಗವಿಲ್ಲದೆಯೂ ಹೋಗಬಹುದು. ಆಗ ಇದು ಗಾಂಧರ್ವಕ್ಕಿಂತಲೂ ದೂಷ್ಯವಾಯಿತು. ಆದುದರಿಂದ ಇದಕ್ಕೂ ವಿಮೋಚನವಿಧಿಯು ಆವಶ್ಯಕವಾಗಿದ್ದಿತು.

ಪೈಶಾಚ:—ಇದು ವಿವಾಹಗಳಲ್ಲಿ ಅಧಮವು. ಕನ್ಯೆಗೆ ಇಷ್ಟವಿಲ್ಲದೆಯೇ, ಆಕೆ ನಿದ್ದೆಹೋಗುವಾಗಲೋ, ಮೈಮರೆತಿರುವಾಗಲೋ, ಮನೋವಿಕಲತ್ವವನ್ನು ಹೊಂದಿದಾಗಲೋ, ಮೇಲೆ ಬಿದ್ದು ವರನು ಆಕೆಯನ್ನು ವಶಮಾಡಿಕೊಳ್ಳುವುದಕ್ಕೆ ಪೈಶಾಚವೆಂದು ಹೆಸರು. ಇದನ್ನು ವಿವಾಹವಿಧಿಗಳಲ್ಲಿ ನಮ್ಮ ಧರ್ಮಕರ್ತರು

×. ರಾಕ್ಷಸೋ ಯುದ್ಧಹರಣಾತ್ ಯಾಜ್ಞವಲ್ಕ್ಯ 1-61. ಮನುಸ್ಮೃತಿ 3-33.

ಏತಕ್ಕೆ ಸೇರಿಸಿದರೋ ಗೊತ್ತಾಗುವುದಿಲ್ಲ. * ಈ ಬಂಧಕ್ಕೆ ವಿಮೋಚನವು ಅಗತ್ಯವೆಂದು ಬೇರೆ ಬರೆಯಬೇಕೇ? ಬರಿಯ ವಿಮೋಚನೆಯೊಂದೇ ಅಲ್ಲದೆ ಕಾಮಾಂಧನಾಗಿ, ದುಶ್ಚೇಷ್ಟಾಲಂಕೃತನಾಗಿ, ಈ ವಿಧವಾದ ವಿವಾಹವನ್ನು ಆಶಿಸುವ ವರನಿಗೆ ಯೋಗ್ಯವಾದ ಕಠಿನಶಿಕ್ಷೆಯು ಕೂಡ ಅತ್ಯಾವಶ್ಯಕವೇ. ಆದರೂ ಚಂದ್ರಗುಪ್ತನ ಕಾಲದಲ್ಲಿ ಆ ಶಿಕ್ಷಾಸ್ಮೃತಿಯು ಮಾತ್ರ ಇದ್ದಂತೆ ಕಂಡುಬರುವುದಿಲ್ಲ.

ಹೀಗೆ ಎಂಟು ವಿಧವಾದ ವಿವಾಹಗಳನ್ನೂ ಚರ್ಚಿಸಿ, ಮೇಲೆ ಬರೆದ ವಿಷಯಗಳನ್ನು ಹೇಳಿದ ಮೇಲೆ, ಚಂದ್ರಗುಪ್ತನ ಕಾಲದಲ್ಲಿ ಪ್ರಚಾರದಲ್ಲಿದ್ದ ದಾಂಪತ್ಯವಿಮೋಚನವಿಧಿಯ ಲಾಭಾಲಾಭಗಳು ಇಂತಹವೆಂದು ಓದುವವರಿಗೆ ಪ್ರತ್ಯೇಕವಾಗಿ ವಿವರಿಸಿ ಹೇಳಬೇಕಾದ ಅಗತ್ಯವಿಲ್ಲ.

ಚಂದ್ರಗುಪ್ತನ ಕಾಲದಲ್ಲಿ ಮತ್ತೊಂದು ವಿಶೇಷವಿದ್ದಿತು. ಆಸ್ತಿಯ ವಿಭಾಗವನ್ನು ಮಾಡಿಕೊಳ್ಳುವುದಕ್ಕೆ ಬಾಧ್ಯರಾದವರೆಲ್ಲರೂ ಯುಕ್ತವಯಸ್ಕರಾಗಿಯೇ ಇರಬೇಕು. ಯುಕ್ತವಯಸ್ಕರಲ್ಲದ ಬಾಧ್ಯರಿದ್ದು ಅವರಿಗೆ ಯೋಗ್ಯವಯಸ್ಸು ಬರುವುದಕ್ಕೆ ಮೊದಲೇ ವಿಭಾಗಗಳು ತೀರ್ಮಾನವಾಡಲ್ಪಟ್ಟಲ್ಲಿ, ಅವರಿಗೆ ಸಾಲದ ಸಂಬಂಧವಿರಲಿಲ್ಲ. ಆಸ್ತಿಗೆ ಮಾತ್ರ ಅವರು ಬಾಧ್ಯರಲ್ಲದೆ ಸಾಲಗಳಿಗೆ ಉತ್ತರವಾದಿಗಳಲ್ಲವಂತೆ! ×



* ಸುಪ್ತಾಂ, ಮತ್ತಾಂ, ಪ್ರಮತ್ತಾಂ, ವಾರಹೋಯತ್ರೋಪಗಚ್ಛತಿ, ಸಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟಮೋಧಮಃ ॥ ಮನುಸ್ಮೃತಿ 3-34.

× ಅರ್ಥಶಾಸ್ತ್ರ, ಪುಸ್ತಕ 3. ಅಧ್ಯಾಯ 5.

# ಹತ್ತನೆಯ ಪ್ರಕರಣವು.

## ಚಂದ್ರಗುಪ್ತನ ಸಮಕಾಲಿಕರು.

ಚರಿತ್ರೆಯಲ್ಲಿ ಮಹಾಪುರುಷರು ಯಾವಾಗಲೂ ಒಂಟಿಯಾಗಿರುವುದಿಲ್ಲ. ಪರಿಸ್ಥಿತಿಯು ಪರಿಪಕ್ವವಾಗಿ ಸೇರಿದ್ದಲ್ಲದೆ ಮಹಾಪುರುಷರು ಅವತರಿಸುವುದು ಅಪರೂಪ. ಆದುದರಿಂದ ಲೋಕಚರಿತ್ರೆಯಲ್ಲಿ ಸುಪ್ರಸಿದ್ಧವಾದ ದೇಶಗಳೆಲ್ಲೆಲ್ಲಿ ನೋಡಿದರೂ, ಕಾರ್ಯನಿರ್ವಹಣ ಧುರಂಧರರು ಸಮಾಜಗಳನ್ನು ಕಲ್ಪಿಸಿಕೊಂಡು ಹೆಸರುಗೊಂಡಿರುವರು. ಚಂದ್ರಗುಪ್ತ ಚಕ್ರವರ್ತಿಯ ಕಾಲವು ಇಂತಹದೇ. ಚಂದ್ರಗುಪ್ತನನ್ನು ಕಣ್ಣಿನ ರೆಪ್ಪೆಯಂತೆ ಕಾದಿದ್ದು ಆತನಿಗೆ ರಾಜ್ಯವನ್ನು ಸಂಪಾದಿಸಿಟ್ಟ ಚಾಣಕ್ಯನೂ, ಆ ಚಾಣಕ್ಯನಿಗೆ ಪ್ರಶಂಸನೀಯ ವಿರೋಧಿಯಾಗಿದ್ದ ರಾಕ್ಷಸನೂ, ಚಂದ್ರಗುಪ್ತನು ಅಡವಿಗಳಲ್ಲಿ ಕಷ್ಟಪಡುತ್ತಿದ್ದಾಗ ಲೋಕವೆಲ್ಲಮ್ನೂ ತನ್ನ ಏಕಚ್ಛತ್ರದ ನೆರಳೊಳಗೆ ತರಲು ಪ್ರಯತ್ನಿಸಿದ ಸುಪ್ರಸಿದ್ಧವೀರನಾದ ಅಲೆಗ್ಝಾಂಡರೂ, ಅಲೆಗ್ಝಾಂಡರನ ತರುವಾಯ, ಆತನ ಕಾರ್ಯವನ್ನು ಸ್ವಲ್ಪತೀರಿಸಿ, ಅಷ್ಟರವನೇ ಎಂದು ಹೆಸರುಗೊಂಡು, ಚಂದ್ರಗುಪ್ತ ಚಕ್ರವರ್ತಿಯ ರಾಜ್ಯವನ್ನಪಹರಿಸಬಂದು, ಆತನಿಂದ ಪರಾಜಿತನಾಗಿ, ತನ್ನ ಮಗಳನ್ನು ಆತನಿಗಿತ್ತು, ಸಂಧಿಮಾಡಿಕೊಂಡ ಸೆಲ್ಯೂಕಸೂ, ಸೆಲ್ಯೂಕಸನಿಂದ ನಿಯಮಿತನಾಗಿ ಚಂದ್ರಗುಪ್ತನ ಆಸ್ಥಾನದಲ್ಲಿ ರಾಯಭಾರಿಯಾಗಿದ್ದು ತನ್ನ ದಿನಚರ್ಯೆಯ ಗ್ರಂಥದಮೂಲಕ ಈಗ ಹಿಂದೂದೇಶದ ಪೂರ್ವಚರಿತ್ರ ಲೇಖನಕ್ಕೆ ಆಧಾರಭೂತನಾದ ಮೆಗಾಸ್ತನೀಸೂ ನಮಗೆ ಚಿರಸ್ಮರಣೀಯರು. ಇವರ ಚರಿತ್ರೆಯನ್ನು ದೊರೆತವರೆಗೆ ಸಂಕ್ಷೇಪವಾಗಿ ಈ ಕೆಳಗೆ ವಿವರಿಸುವೆವು.

## ಚಾಣಕ್ಯ ಚರಿತ್ರವು.

ಶ್ರೀಮದ್ರಾಮಾಯಣದಲ್ಲಿ ಅಯೋಧ್ಯಾಪುರಿಯನ್ನೂ ದಶರಥ ಸುಮಂತ್ರರನ್ನೂ, ಕಿಷ್ಕಿಂಧಾಪುರವನ್ನೂ, ಸುಗ್ರೀವ ಹನುಮಂತರನ್ನೂ, ಭಾರತದಲ್ಲಿ ಧೃತರಾಷ್ಟ್ರ ವಿದುರರನ್ನೂ, ಕೃಷ್ಣಾರ್ಜುನರನ್ನೂ, ಒಟ್ಟಾಗಿ ನೆನಸುವುದು ಎಷ್ಟು ಪ್ರಕಟವೋ ಅದರಂತೆಯೇ ಮುದ್ರಾರಾಕ್ಷಸವನ್ನು ಓದುವವರಿಗೆ ಚಾಣಕ್ಯ ಚಂದ್ರಗುಪ್ತರನ್ನೂ' ನಂದ ರಾಕ್ಷಸರನ್ನೂ, ಏಕಶ್ವಾಸದಿಂದ ಸ್ಮರಿಸುವುದು ಸಹಜವು. ಮತ್ತೂ, ಆವಾಚಕರು ಚಾಣಕ್ಯ ವಾಕ್ಯಗಳನ್ನೂ ಚಾಣಕ್ಯ ಚೇಷ್ಟಿತಗಳನ್ನೂ ಪರೀಕ್ಷಿಸುವಲ್ಲಿ

ವಿಶ್ವಾಮಿತ್ರನ ಕೋಪಸಾಹಸ ಸಾಮರ್ಥ್ಯಗಳನ್ನೂ, ಭೀಷ್ಮನ ನೀತಿಪ್ರವೀಣತೆಯನ್ನೂ, ಕೃಷ್ಣನ ಶತ್ರುಸಂಹಾರವನ್ನೂ ಕಪಟಸೂತ್ರಧಾರಿತ್ವವನ್ನೂ, ಹನುಮಂತನ ಸ್ವಾಮಿಕಾರ್ಯ ಧುರಂಧರತ್ವವನ್ನೂ, ಹನುಮದ್ಭೀಷ್ಮರ ಬ್ರಹ್ಮಚರ್ಯ್ಯನಿಷ್ಠೆಯನ್ನೂ ಸ್ಮರಿಸದಿರಲಾರರು.

ವಿಷ್ಣುಪುರಾಣದಲ್ಲಿಯೂ, ಮತ್ಸ್ಯ, ವಾಯು, ಭಾಗವತ ಪುರಾಣಗಳಲ್ಲಿಯೂ ಬೃಹತ್ಕಥೆಯಲ್ಲಿಯೂ, ಚಾಣಕ್ಯನು ಪ್ರಶಂಸಿಸಲ್ಪಟ್ಟಿರುವನು. ಕಾಮಂದಕದಲ್ಲಿ "ಪ್ರತಿಗ್ರಹವನ್ನು ಮಾಡದ, ವಿಶಾಲವಾದ ಋಷಿವಂಶದಲ್ಲಿ ಹುಟ್ಟಿದ ಯಶಸ್ವಿಯೂ ಅಗ್ನಿಸಮತೇಜನೂ, ವೇದವಿದ್ವರನೂ, ನಾಲ್ಕುವೇದಗಳನ್ನೂ ಒಂದೇ ವೇದಕ್ಕೆ ಬೇಕಾಗುವಷ್ಟು ಕಾಲದೊಳಗಾಗಿ ಅಧ್ಯಯನ ಮಾಡಿದವನೂ ಪ್ರಜ್ವಲನತೇಜನೂ, ಅಭಿಚಾರವಜ್ರದಿಂದ ನಂದಪರ್ವತವನ್ನು ಬೇರುಸಹಿತ ಕಿತ್ತುಹಾಕಿದ ಭೂಸುರನೂ, ಶಕ್ತಿಧರಸಮನೂ, ಮಂತ್ರಶಕ್ತಿಯಿಂದ ಏಕಾಕಿಯಾಗಿ ಕಾರ್ಯಕರಣ ಶಕ್ತನೂ, ಚಂದ್ರಗುಪ್ತನಿಗೆ ಈ ಮೇದಿನಿಯನ್ನು ಸಂಪಾದಿಸಿಕೊಟ್ಟವನೂ, ಅರ್ಥಶಾಸ್ತ್ರ ಮಹಾಸಮುದ್ರದೊಳಗಿನಿಂದ ನೀತಿಶಾಸ್ತ್ರಾಮೃತವನ್ನು ಮಥಿಸಿ ಎತ್ತಿ ತೆಗೆದವನೂ ಆದ ವಿಷ್ಣುಗುಪ್ತನಿಗೆ ನಮಸ್ಕರಿಸುವೆನು" ಎಂದಿರುವುದು.*

ರಾಕ್ಷಸನು ಚಾಣಕ್ಯ ಸನ್ನಿಧಿಯನ್ನು ಸೇರಿದಾಗ "ಈತನಲ್ಲವೇ ದುರಾತ್ಮನು ಅಥವಾ ಮಹಾತ್ಮನಾದ ಕೌಟಿಲ್ಯನು! ಸಮುದ್ರವು ರತ್ನಗಳಿಗೆಲ್ಲ ಬೊಕ್ಕಸವಾದಂತೆ, ಸರ್ವಶಾಸ್ತ್ರಗಳಿಗೂ ಶರಣ್ಯನಾದವನು. ಈತನಲ್ಲಿ ಮಾತ್ಸರ್ಯ ವಶದಿಂದಲ್ಲವೇ ಈತನ ಗುಣಗಳಿಗೆ ಸಂತೋಷಪಡದೆ ಇರುವೆವು!" ೧ ಎನ್ನುತ್ತ ಪಾಂಡಿತ್ಯಸ್ತೋತ್ರವನ್ನು ಮಾಡಿರುವನು. ದಶಕುಮಾರಚರಿತ, ಪಂಚತಂತ್ರ, ಕಾದಂಬರಿ, ಚಂಡಕೌಶಿಕ, ಬೃಹತ್ಕಥೆ, ಹಿತೋಪದೇಶ, ವಿಕ್ರಮಾರ್ಕ ಚರಿತವೇ ಮೊದಲಾದ ಗ್ರಂಥಗಳಲ್ಲಿ ಸಮಸ್ತರಾಜನೀತಿಗಳಿಗೂ ಚಾಣಕ್ಯನು ದೊಡ್ಡ ಪ್ರಮಾಣವಾಗಿ ಅಂಗೀಕರಿಸಲ್ಪಟ್ಟಿರುವನು. ೨

---

* ವಂಶೇ ವಿಶಾಲವಂಶಾನಾ ಮೃಷೀಣಾಮಿವಭೂಯಸಾಂ ।
ಅಪ್ರತಿಗ್ರಾಹಕಾಣಾಂಯೋ ಬಭೂವ ಭುವಿವಿಶ್ರುತಃ ॥

೧. ಆಕರಃ ಸರ್ವಶಾಸ್ತ್ರಾಣಾಂ ರತ್ನಾನಾಮಿವ ಸಾಗರಃ ।
ಗುಣೈರ್ನ ಪರಿತುಷ್ಯಾಮೋ ಯಸ್ಯ ಮತ್ಸರಿಣೋ ವಯಮ್ ॥

೨. ನೀತಿಶಾಸ್ತ್ರವು ನಮ್ಮ ದೇಶದಲ್ಲಿ ಮೊತ್ತಮೊದಲು ಉತ್ಪನ್ನವಾದುದು. ಸಂಸ್ಕೃತ ಗ್ರಂಥಾವಳಿಯಲ್ಲಿ ಅತ್ಯಂತ ಪ್ರಾಚೀನವಾದುದು. ಚಾಣಕ್ಯನ ನೀತಿಸಾರವು ಸ್ವಜಾತೀಯ ಶಾಸ್ತ್ರವುಗಳೆಲ್ಲವುಗಳಲ್ಲಿಯೂ ವಿಶೇಷವಾಗಿ ಬಹುಜನಾದೃತವಾಗಿದೆ.

ಜಾತವೇದಾ ಇವಾರ್ಚಿಷ್ಮಾಂಶ್ಚತುರ್ವೇದವಿದಾಂ ವರಃ |
ಯೋಽಧೀತವಾನ್ಸು ಚತುರ ಶ್ಚತುರೋಽಪ್ಯೇಕವೇದವತ್ ||
ಯಸ್ಯಾಭಿಚಾರ ವಜ್ರೇಣ ವಜ್ರಜ್ವಲನ ತೇಜಸಃ |
ಪಪಾತ ಮೂಲತಃ ಶ್ರೀಮಾನ್ ಸುಪರ್ವಾನಂದಪರ್ವತಃ ||
ಏಕಾಕೀ ಮಂತ್ರಶಕ್ತ್ಯಾ ಯಃ ಶಕ್ತಃ ಶಕ್ತಿಧರೋಪಮಃ |
ಆಜಹಾರ ನೃಚಂದ್ರಾಯ ಚಂದ್ರಗುಪ್ತಾಯ ಮೇದಿನೀಂ ||
ನೀತಿಶಾಸ್ತ್ರಾಮೃತಂ ಧೀಮಾ ನರ್ಥಶಾಸ್ತ್ರಮಹೋದಧೇಃ |
ಯ ಉದ್ಧಧ್ರೇ ನಮಸ್ತಸ್ಮೈ ವಿಷ್ಣುಗುಪ್ತಾಯ ವೇಧಸೇ ||

ಮುದ್ರಾರಾಕ್ಷಸ ನಾಟಕದಲ್ಲಿ ಪ್ರಬಲಪಾತ್ರವಾಗಿ ಪ್ರಜ್ವಲಿಸುತ್ತ, ಪರಿಸ್ಫುಟಬುದ್ಧಿಯನ್ನೂ ಆತ್ಮವಿಶ್ವಾಸವನ್ನೂ, ಯುಕ್ತಿತಂತ್ರಜ್ಞತೆಯನ್ನೂ ನಿರಂಕುಶ ನೀತಿಶಾಸ್ತ್ರ ಪ್ರಾವೀಣ್ಯವನ್ನೂ, ದೂರದರ್ಶನವನ್ನೂ, ನಿರ್ಣೀತ ಫಲಪ್ರಾಪ್ತಿಗೆ ಬೇಕಾದ ಸರ್ವೋದ್ಯಮಪರತ್ವವನ್ನೂ ಚಾಣಕ್ಯನು ತೋರಿಸುತ್ತಿರುವನು. ಈ ನಾಟಕದಲ್ಲಿಯ ಸರ್ವಕಾರ್ಯ ವ್ಯವಸಾಯವೂ ಚಾಣಕ್ಯನದಾಗಿಯೇ ದ್ಯೋತಕವಾಗುತ್ತಿದೆ.

ಈತನು—"ವಿಘ್ನೈರ್ಮುಹುರಪಿ ಪ್ರತಿಹನ್ಯಮಾನಾಃ | ಪ್ರಾರಬ್ಧಮುತ್ತಮಗುಣಾಃ ನ ಪರಿತ್ಯಜಂತಿ" ದೆಂಬ ಶ್ಲೋಕಕ್ಕೆ ದೃಷ್ಟಾಂತ ರೂಪನೆಂದರೂ ಸರಿಹೋಗದು. ವಿಘ್ನಗಳ ಛಾಯೆಗಳನ್ನಾದಗೂ ಹೋಗಲಾಡಿಸುವಂತೆ ಭೂತಭವಿಷ್ಯದ್ವ

---

ಇತ್ತ ಈಚೆಗೆ ಕೆಲವು ವರ್ಷಗಳ ಹಿಂದೆ "ಮೈಸೂರು ರಿವ್ಯೂ" ನಲ್ಲಿ ಮ. ರಾ. ಆರ್. ಶ್ಯಾಮಶಾಸ್ತ್ರಿ ಬಿ. ಏ. ಯವರು, ಚಾಣಕ್ಯಕೃತ ಅರ್ಥಶಾಸ್ತ್ರದಲ್ಲಿ ಒಂದು ಭಾಗವನ್ನು ಇಂಗ್ಲೀಷಿಗೆ ಭಾಷಾಂತರ ಮಾಡುತ್ತ ಬಂದರು. ಇದ್ದ ಪ್ರಾಚೀನಗ್ರಂಥಪ್ರತಿಯಾಗಿ ಅನೇಕ ಪಂಡಿತರಿಂದ ಅಂಗೀಕೃತವಾಗಿದೆ. ಚಾಣಕ್ಯರಚಿತ ಶಾಸ್ತ್ರಗಳನ್ನೂ, ಆತನು ಪಡೆದ ಬಿರುದುಗಳನ್ನೂ ಈ ಶ್ಲೋಕದಲ್ಲಿ ಬರೆದಿದೆ.

ವಾತ್ಸ್ಯಾಯನೋ ಮಲ್ಲನಾಗಃ ಕೌಟಿಲ್ಯಶ್ಚಣಕಾತ್ಮಜಃ |
ದ್ರಾವಿಲಃ ಪಕ್ಷಿಲಸ್ವಾಮೀ ವಿಷ್ಣುಗುಪ್ತೋಂಗುಲಶ್ಚ ಸಃ ||

ಇದರಲ್ಲಿ ಪಕ್ಷಿಲನಾಮದಿಂದ ಆತನು ನೈಯ್ಯಾಯಿಕನೆಂದೂ, ಕೌಟಿಲ್ಯನೆಂಬುದರಿಂದ ರಾಜತಂತ್ರಜ್ಞನೆಂದೂ, ಜ್ಯೋತಿಶ್ಶಾಸ್ತ್ರದಲ್ಲಿ ವಿಷ್ಣುಗುಪ್ತನೆಂದೂ, ಕಾಮಸೂತ್ರದಲ್ಲಿ ವಾತ್ಸ್ಯಾಯನನೆಂದೂ, ನೀತಿಶಾಸ್ತ್ರದಲ್ಲಿ ಚಾಣಕ್ಯನೆಂದೂ ಪ್ರಸಿದ್ಧಿ ಹೊಂದಿರುವನು. ಮಲ್ಲನಾಗ ನಾಮವು ಆತನ ಯುದ್ಧವೀರತ್ವವನ್ನೂ, ದ್ರಾವಿಲ ನಾಮವು ರಣರಂಗ ಪ್ರಾಮುಖ್ಯತೆಯನ್ನೂ ತೋರಿಸುತ್ತಿವೆ. ಅಂಗುಲನಾಮವು ಆತನ ಗಣಿತಶಾಸ್ತ್ರನಿಪುಣತೆಯನ್ನು ತೋರಿಸುತ್ತಿರಬಹುದು. ತ್ರಿಕಾಂಡಶೇಷದಲ್ಲಿ ಅಂಸುಲ ಎಂಬ ಪಾಠಾಂತರವಿರುವುದರಿಂದ ವಿಶಾಲಭುಜನೆಂದೂ ದೃಢಗಾತ್ರನೆಂದೂ ಸೂಚಿತನಾಗುತ್ತಿದೆ.

ರ್ತಮಾನಗಳನ್ನು ಗಣಿತಶಾಸ್ತ್ರಜ್ಞರ ಸುನಿಶ್ಚಿತಬುದ್ಧಿಯಿಂದ ಸಮಾಸಗೊಳಿಸಿ, ಉಪಕ್ರಮಿಸಿದ ಯತ್ನಗಳನ್ನು ಪೂರ್ವನಿರ್ಣೀತ ಉಪಸಂಹಾರಗಳಿಗೆ ಕೊನೆಸಾಗಿಸುತ್ತ, ಆಯಾ ದೇಶಗಳಲ್ಲಿ ಆಯಾ ಕಾಲಗಳಲ್ಲಿ ಅಸ್ಖಲಿತಜಯರಾಗಿ ಸಂಚರಿಸಿದ ಮಹಾತ್ಮರಲ್ಲೊಬ್ಬನು. ಗ್ರೀಕರಲ್ಲಿ ಅಲೆಗ್ಝಾಂಡರು, ರೋಮಕರಲ್ಲಿ ಸೀಜರು, ಫಿನಿಶಿಯನರಲ್ಲಿ ಹೆನ್ನಿಬಾಲ್, ಯುರೋಪಿಯನರಲ್ಲಿ ನೆಪೋಲಿಯನ್, ಅಮೆರಿಕದವರಲ್ಲಿ ವಾಷಿಂಗ್‌ಟನ್,—ಇವರ ಚರಿತ್ರೆಗಳನ್ನೋದಿದವರಿಗೆ ಎಂತಹ ಉತ್ಸಾಹವುಂಟಾಗುವುದೋ ಅಂತಹ ಉತ್ಸಾಹವು ಚಾಣಕ್ಯ ಚಂದ್ರಗುಪ್ತರ ಚರಿತ್ರೆಯನ್ನೋದಿದವರಿಗೆ ಹುಟ್ಟದಿರದು. ಅಲೆಗ್ಝಾಂಡರು ಮೊದಲಾದವರಿಗಾದರೂ ಕೆಲಕೆಲವು ಅಪಜಯಗಳೂ ಚಿತ್ತಕ್ಲೇಶಗಳೂ ಇದ್ದುವು. ಅದರೆ ಈ ಚಾಣಕ್ಯನಿಗೆ ಮಾತ್ರ ಅದೊಂದೂ ಇಲ್ಲ. "ವೃಷಲನ ಕಲ್ಪನಾಯಾಸವೂ ನನ್ನ ಮತಿಜಾಗರೂಕತೆಯೂ" ಎಂದು ಚಾಣಕ್ಯವಚನಗಳಲ್ಲಿ ಓದುವವರು ಕಂಡುಕೊಳ್ಳಬಹುದು. ಆದರೆ ಸಮಸ್ತ ವಿಷಯಗಳನ್ನು ಆತನು ಅನಾಯಾಸವಾಗಿಯೇ ನಿರ್ವಹಿಸಿದಂತೆಯೂ, ಒಂದರ ಹಿಂದೆ ಮತ್ತೊಂದು ತಡೆಯಿಲ್ಲದೆ ಬರುವುದರಿಂದ ಕಾರ್ಯಪ್ರವಾಹದಲ್ಲಿ ವೇಗವೇಗವಾಗಿ ಎಲ್ಲರನ್ನೂ ಎತ್ತಿಕೊಂಡು ಹೋಗುವಂತೆಯೂ ತೋರುತ್ತಿರುವುದು.

ಪ್ರತಿಜ್ಞಾಭಂಗಕಾರಿಗಳಾದ ದಯಾದಾಕ್ಷಿಣ್ಯಗಳಿಗೆಡೆಗೊಡದೆ, ಅಪತ್ರಿಗ್ರಹಣವನ್ನು ಮರೆಯಿಸುವ ರಾಜಕೀಯಾಭಿಮಾನಾಡಂಬರಾಕಾಂಕ್ಷೆಗಳನ್ನು ಕನಸಿನಲ್ಲಾದರೂ ಯೋಚಿಸದೆ, ಜೀರ್ಣವಾದ ಗೋಡೆಯುಳ್ಳ ಪರ್ಣಶಾಲೆಯಲ್ಲಿ ತ್ರೇತಾಗ್ನಿಸಂರಕ್ಷಣಾವಿಹಿತಕರ್ಮಗಳನ್ನು ಪರಿಪಾಲಿಸಿಕೊಳ್ಳುತ್ತ, ಬ್ರಾಹ್ಮಣವೃತ್ತಿಪರನಾಗಿ, ರಾಜನೀತಿ ಧುರಂಧರತೆಯಲ್ಲಿಯೂ ತನ್ನೀತಿಯುಕ್ತಮಾರ್ಗವನ್ನವಲಂಬಿಸುತ್ತ, ಬ್ರಾಹ್ಮಣ ಕ್ಷಾತ್ರಧರ್ಮಗಳ ಸಮ್ಮೇಳನವನ್ನು ಮಾಡಿಕೊಂಡು, ಚಾಣಕ್ಯನು ಉಗ್ರಾಶ್ವ ಶಾಂತಾಶ್ವಗಳನ್ನು ಹೂಡಿದ ರಥವನ್ನು ಓಡಿಸುವ ಸಾರಥಿಯಂತೆ ಪ್ರವರ್ತಿಸಿದನು. "ಈ ಕಾಲದಲ್ಲಿಯೂ ಬ್ರಾಹ್ಮಣಾದಿ ಜಾತಿಜನ್ಯರು ತಮ್ಮತಮ್ಮ ಧರ್ಮಗಳನ್ನು ಪರಿಪಾಲಿಸಿಕೊಳ್ಳುವುದಕ್ಕಾಗದೆ, ಆ ಧರ್ಮಗಳು ಶಾಸ್ತ್ರಗಳಲ್ಲಿ ಮಾತ್ರ ಸುಸ್ಥಿರವಾಗಿ ನೆಲೆಗೊಂಡಿರಲು, ದಿನದಿನಾನುಭವದಲ್ಲಿ ಮಿಶ್ರಾಚಾರ ಪರರಾಗಿ ಇರುವುದನ್ನು ನೋಡುವುದಿಲ್ಲವೇ? ನಿತ್ಯಕರ್ಮಾನುಷ್ಠಾನಗಳೂ ತ್ರೇತಾಗ್ನಿ ಹೋತ್ರಕ್ರಿಯೆಗಳೂ ಗ್ರಾಮವಾಸಗಳಲ್ಲಿ ಕೂಡ ಮಾಯವಾಗಿರುವುವಲ್ಲವೇ?"—ಎನ್ನುವಿರೇನೋ ! ಮಹಮ್ಮದೀಯ ಪ್ರಭುತ್ವದಲ್ಲಿ ಶ್ರುತಿಸ್ಮೃತಿಗಳ ಯಥಾರ್ಥಾನುಷ್ಠಾನವು ಹೇಗಿದ್ದಿತೋ ತಚ್ಚರಿತ್ರಕಾರರು ಹೇಳಬಲ್ಲರು. ಅದಕ್ಕೂ ಮೊದಲಿನ ಚಾಣಕ್ಯನು ಈಗಿನವರಂತೆಯೇ ವೇಷಧಾರಿ ಬ್ರಾಹ್ಮಣನೆ

ನ್ನುವುದು ಕೇವಲ ಶ್ರದ್ಧಾರ್ಹವಾದುದಲ್ಲ. ಅವರ ನಿಷ್ಠೆಗಳೆಲ್ಲವೂ ಬೌದ್ಧಜೈನರ ವ್ಯಾಪ್ತಿಯನ್ನು ಆತಂಕಪಡಿಸುವುದಕ್ಕೆ ಚಾಣಕ್ಯಪ್ರಭೃತಿಗಳಾದ ಬ್ರಾಹ್ಮಣರು ಮಾಡಿದ ಒಳಸಂಚೆಂದು ಮುದ್ರಾಮಂಜೂಷವೆಂಬ ಕನ್ನಡಗ್ರಂಥದಲ್ಲಿ ಚಾಣಕ್ಯ ವಾಙ್ಮೂಲವಾಗಿ ಹೇಳಲ್ಪಟ್ಟಿದೆ. ಕೆಲವರು ಪಾಶ್ಚಾತ್ಯಪಂಡಿತರು ಹೀಗೆಯೇ ಊಹಿಸಿದರು. ಆದರೆ ಇದು ಸಂದೇಹಾಸ್ಪದವೆಂದು ತೇಲಂಗರವರ ಅಭಿಪ್ರಾಯವು. ನಾಲ್ಕನೆಯ ಶತಾಬ್ದದಲ್ಲಿ ಬೌದ್ಧನಿಗ್ರಹ ಮಾಡಿದಂತೆ ತಿಳಿದುಬರುವ ಗುಪ್ತರಾಜರ ಕೃತ್ಯವನ್ನು ಚಾಣಕ್ಯನ ಮೇಲೆ ಆರೋಪಿಸಿದರೇನೋ? ಬೌದ್ಧನಿಗ್ರಹದ ಕಥೆಗೆಡೆಗೊಡದೆ ಮೆಗಾಸ್ತನೀಸನ ದಿನಚರ್ಯೆಯು ಅವರನ್ನು ಕುರಿತು ಪ್ರಶಂಸೆಯನ್ನೇ ಮಾಡದೆ ಇದೆ. ಆದುದರಿಂದ ಬೌದ್ಧಜೈನರ ಆಧಿಕ್ಯಕ್ಕೆ ಅಶೋಕವರ್ಧನನ ಕಾಲವೇ ಮೊದಲೆಂದು ಊಹಿಸಬೇಕಾಗಿದೆ. ಅಥವಾ ಬೌದ್ಧರಂತಹವರನ್ನು ನಿಗ್ರಹಿಸುವುದಕ್ಕೆ ಅವರನ್ನು ಮೀರಿದ ಸುಶೀಲತಾನುಷ್ಠಾನವೇ ಯುಕ್ತಮಾರ್ಗವಲ್ಲದೆ, ಕೇವಲ ರಾಜಸ ತಾಮಸ ಭೂಯಿಷ್ಠವಾದ ರಾಜದ್ರೋಹಾದಿಕಾರ್ಯಗಳಲ್ಲವೆಂದು ನೆನಪಿನಲ್ಲಿಡಬೇಕಾಗಿದೆ. ನಾವು ನಿರ್ಣಯಿಸತಕ್ಕುದೇನೆಂದರೆ, ಚಾಣಕ್ಯನ ಅಭಿಪ್ರಾಯವು ಸ್ವಧರ್ಮವನ್ನು ರಕ್ಷಿಸಿಕೊಳ್ಳತಕ್ಕುದು; ಕ್ಷತ್ರಿಯಕೃತ್ಯಗಳಲ್ಲಿ ಫಲಸಂಪ್ರಾಪ್ತಿಗೆ ಬೇಕಾದ ಮಾರ್ಗವಾವುದಾದರೂ ನೀತಿಯುಕ್ತವೇ ಆಗಿರುವುದು. ರಾಕ್ಷಸನು ಚಂದ್ರಗುಪ್ತನ ನಾಶಕ್ಕಾಗಿ ಮಾಡಿದ ಕೂಟಪ್ರಯತ್ನಗಳೂ ಅಂತಹವೇ. ಆದುದರಿಂದ ಆ ಕಾಲದ ರಾಜಾಮಾತ್ಯಕುಲದವರ ಅಭಿಪ್ರಾಯದಲ್ಲಿ ನೀತಿಸ್ವರೂಪವು ಅದರಂತೆಯೇ ಭಾವಿಸಲ್ಪಟ್ಟಿದ್ದಿತೆಂದು ಹೇಳಬೇಕು.

'ಚಾಣಕ್ಯವಟು' ಎಂಬ ಪದವು ರಾಕ್ಷಸ ಮತ್ತು ರಾಕ್ಷಸ ಪಕ್ಷಪಾತಿಗಳ ವೈರಜನ್ಯವಷ್ಟೇ ಅಲ್ಲದೆ ಚಾಣಕ್ಯನ ವಯಸ್ಸು ರಾಕ್ಷಸನ ವಯಸ್ಸಿಗಿಂತಲೂ ಬಹಳ ಕಡಿಮೆ ಎಂಬಂತೆ ತೋರಿಸುವುದು. ಕೆಲವರ ಅಭಿಪ್ರಾಯದಂತೆ ಚಂದ್ರಗುಪ್ತನು ಸರ್ವಾರ್ಥಸಿದ್ಧಿಗೆ ಮೊಮ್ಮಗನೇ ಆಗಿದ್ದಲ್ಲಿ ನಂದರು ಆತನಿಗೆ ಚಿಕ್ಕಪ್ಪಂದಿರಾಗಬೇಕು; ಅಂತಹ ನಂದರನ್ನು ಶೈಶವದಿಂದಲೂ ಕಾಪಾಡಿದವನೂ ಮಧ್ಯವಯಸ್ಸನ್ನು ದಾಟಿದವನೂ ಆದ ರಾಕ್ಷಸನು ಮಧ್ಯವಯಃ ಪ್ರವಿಷ್ಟನಾಗಿರಬೇಕು.*

---

* "ಭೋಃ ಅಮಾತ್ಯ ರಾಕ್ಷಸ, ವಿಷ್ಣುಗುಪ್ತೋಽಹ ಮಭಿವಾದಯೇ" ಎಂಬ ವಾಕ್ಯವನ್ನು ಹೇಳುತ್ತ ಚಾಣಕ್ಯನು ರಾಕ್ಷಸನಿಗೆ ನಮಸ್ಕರಿಸುವುದೇ ಆತನ ವಯಸ್ಸು ಕಡಿಮೆಯೆಂಬುದಕ್ಕೆ ಸಾಕಾದಷ್ಟು ಆಧಾರವಾಗಿದೆ.

ಚಾಣಕ್ಯನು ಪರಿಪೂರ್ಣವಾಗಿ ದುಷ್ಟಾತ್ಮನೆಂತಲೇ ಹೇಳಬರುವಂತಿಲ್ಲ. ರಾಕ್ಷಸನ ಸಾಮರ್ಥ್ಯವನ್ನೂ ಸ್ವಾಮಿಭಕ್ತಿಯನ್ನೂ ಶ್ಲಾಘಿಸುತ್ತಿರುವನು. ಅಂತಹ ಅಮಾತ್ಯನನ್ನು ಸುರಕ್ಷಿತವಾಗಿ ಚಂದ್ರಗುಪ್ತನ ಸಹಾಯಕ್ಕೆ ಸೇರಿಸದೆ ಇದ್ದಲ್ಲಿ ಮುದ್ರಾರಾಕ್ಷಸಕ್ಕೂ, ಮುದ್ರಾಮಂಜೂಷಕ್ಕೂ ಅವಕಾಶಾಸ್ಪದಗಳೇ ಇಲ್ಲದೆಹೋಗುತ್ತಿದ್ದಿತು. ಮಿತ್ರನಿಗಾಗಿ ಪ್ರಾಣತ್ಯಾಗ, ಮಾನತ್ಯಾಗ, ಕ್ಷೇಮತ್ಯಾಗ, ಕುಟುಂಬತ್ಯಾಗಗಳಿಗೆ ನಿರ್ಲಕ್ಷ್ಯವಾಗಿ ಎದೆಗೊಟ್ಟು ಚಂದನದಾಸನನ್ನು ಹೊಗಳಿ, ಕಾರ್ಯಾರ್ಥವಾಗಿ ಕಾರಾಗೃಹಾದಿ ಪೀಡೆಗಳಿಗೆ ಒಳಪಡಿಸಿದರೂ, ಕೊನೆಗೆ ಆತನನ್ನು ಲೋಕಕ್ಕೆಲ್ಲ ಅಗ್ರಶ್ರೇಷ್ಠಿಯಾಗಿ ನಿಯಮಿಸುವನು. ಚಂದ್ರಗುಪ್ತನು ವೃಷಲನಾದರೂ, ಅಸೂಹಾ ಕ್ಷಾತ್ರಕುಲಜನಿತ ಪರಿಪಾಲಿತ ರಾಜ್ಯಕ್ಕೆ, ಸಿಂಹಾಸನ ಸದೃಶಪಾರ್ಥಿವಸಾಂಗತ್ಯವನ್ನಿಟ್ಟು ಅಭಿಷೇಕ ಮಾಡಿದನು.

ಅರ್ಧರಾಜ್ಯದಾನಕ್ಕೊಪ್ಪಿಕೊಂಡ ಪರ್ವತೇಶ್ವರನನ್ನು ಕರೆಯಿಯಿಸಿದವನು ವಿಷಕನ್ಯೆಯ ಮೂಲಕ ಅವನನ್ನು ಕೊಂದುದನ್ನು ನೋಡಿದರೆ, ''ಪೂರ್ವಪ್ರತಿಜ್ಞೆಯಾದ ನಂದರಾಜ್ಯಸರ್ವಸ್ವಕ್ಕೂ, ಚಂದ್ರಗುಪ್ತಾಭಿಷೇಕಕ್ಕೂ ಭಂಗ ಬರುವುದು ಮತ್ತು ಆ ಪರ್ವತರಾಜನು ಅರ್ಧರಾಜ್ಯಲಾಭದಿಂದ ತೃಪ್ತಿಹೊಂದದೆ ಅತ್ಯಾಸೆಗೊಂಡು ಸ್ವರಾಜ್ಯಬಲವನ್ನು ಕೂಡಿಸಿಕೊಂಡು ಚಂದ್ರಗುಪ್ತನ ಅರ್ಧರಾಜ್ಯವನ್ನು ನುಂಗಿಬಿಡತಕ್ಕ ಅನಿಯತ ಧರ್ಮನು. ಆರುದರಿಂದ ಆತನ ಸಾಮಿಪ್ಯದಿಂದ ಪ್ರತಿಜ್ಞೆಯೆಲ್ಲವೂ ಭಂಗವಾಗುವುದು'' ಎಂದು ಊಹಿಸಿ ಇಂತಹ ಸಂದಿಗ್ಧದಲ್ಲಿ ಪರ್ವತರಾಜನನ್ನು ತೊಲಗಿಸುವುದೇ ಸುನೀತಿಯೆದೂ, ಅದಕ್ಕೆ ಉಪಾಯವನ್ನು ರಾಕ್ಷಸನೇ ತೋರಿಸಿರಲು, ಅದನ್ನು ಅಂಗೀಕರಿಸುವುದೇ ಭಗವದಾಜ್ಞೆಯೆಂದೂ ಊಹಿಸಿರಬೇಕು. ವೈರೋಚಕನ ಅಭಿಷೇಕಕ್ಕೂ ಅದೇ ನ್ಯಾಯವೆಂಬುದರಿಂದ ಕೂಡ, ಕೂಟತೋರಣದಿಂದ ಚಂದ್ರಗುಪ್ತನನ್ನು ತಪ್ಪಿಸುವುದೂ ಆಯಿತು. ರಾಕ್ಷಸಗ್ರಹಣಕ್ಕಾಗಿ ಮಾಡಿದ ಉಪಾಯವು, ಪಂಚರಾಜರ ನಿಗ್ರಹಕ್ಕೂ, ಮಲಯಕೇತು ಸಂಯಮನಕ್ಕೂ ಸಹಾಯಕವಾಗುವಂತೆ ಮಾಡಿದ ಬಹುಫಲದಾಯಕವಾದ ನೀತಿಬೀಜವು, ಎರಡು ಪಕ್ಷದ ಸೇನೆಗಳಿಗೂ ಅಗತ್ಯವಿಲ್ಲದ ಜೀವನಷ್ಟವಿಲ್ಲದೆ ಇರುವಂತೆಯೂ, ಭೂಲುಬ್ಧರಾದ ಮೂಲಕಂಟಕರು ಮಾತ್ರ ನಿವಾರಿಸಲ್ಪಡುವಂತೆಯೂ ಮಾಡುವುದು ಮಹಾಜನೋಪಕಾರಿಯೂ ಆದವನ ಕೆಲಸವೆಂದು ಶ್ಲಾಘಿಸಲ್ಪಡತಕ್ಕುದಾಗಿದೆ. ×

× ಕಾರ್ಲೈಲ್ ಎಂಬದೊಡ್ಡ ಚರಿತ್ರತತ್ವಜ್ಞನು ಫ್ರಾನ್ಸ್‌ದೇಶದ ನೆಪೋಲಿಯನ್ ಮತ್ತು ಜರ್ಮನ್ ದೇಶದ ಫ್ರೆಡರಿಕ್ ಚಕ್ರವರ್ತಿಗಳ ತಾರತಮ್ಯವನ್ನು ಪರಿಶೀಲಿಸುತ್ತ, ಎರಡುಕಡೆಯವರಿಗೂ ಪ್ರಾಣನಷ್ಟವು ಅನವಶ್ಯವಾಗಿ ಹೆಚ್ಚದೆ, ಕಾರ್ಯಸಾಧಕವಾದ ಪರಾಜಯವೇ ಜಯತುಲ್ಯ

ರಾಕ್ಷಸನನ್ನು ಭೇದಿಸುವುದಕ್ಕೆ ತಾನು ಆಲೋಚಿಸಿದಾಗಲೆಲ್ಲ, ವೀರರಸ ಪೂರ್ಣವಾದ ಆತ್ಮಶ್ಲಾಘನ ವಚನಗಳನ್ನು ಏಕಾಂತದಲ್ಲಿ ಹೇಳಿಕೊಂಡವನಾದರೂ, ರಾಕ್ಷಸನ ಮಿತ್ರನಾದ ಚಂದನದಾಸನ ಇದಿರಲ್ಲಿ "ಅನ್ಯಶ್ಚ, ನಂದವಿವ ವಿಷ್ಣುಗುಪ್ತ—" ಎನ್ನುತ್ತ ಆತ್ಮಸ್ತುತಿವಿಷಯವಾಗಿ, ಅರ್ಧೋಕ್ತಿಯಲ್ಲಿ ಲಜ್ಜೆಯನ್ನು ನಟಿಸುವುದೂ, "ಸರ್ವಂ ಮೇ—(ಎಂದು ಅರ್ಧೋಕ್ತಿಯಲ್ಲಿ ಲಜ್ಜೆಯನ್ನು ನಟಿಸುವುದು) ವೃಷಲಸ್ಯ ವೀರಭವತಾ ಸಂಯೋಗ ಮಿಚ್ಛೋರ್ನಯಃ" ಎಂಬುದೂ ಚಾಣಕ್ಯನ ಸಭಾವಿನಯವನ್ನು ದ್ಯೋತನಪಡಿಸುತ್ತಿದೆ. ಇಂತಹ ಆತ್ಮಸ್ತುತಿಯಲ್ಲಿ ಲಜ್ಜೆಯುಳ್ಳವನ ಸ್ವಭಾವವು ಎಷ್ಟೋ ನೀತಿನಮ್ರತೆಯನ್ನು ವಿಶದಗೊಳಿಸುತ್ತಿದೆ.

ಕೌಟಿಲ್ಯನೆಂದು ಹೆಸರುಗೊಂಡ ಈತನ ಕೌಟಿಲ್ಯವು ಈತನಿಗೆ ಮಾತ್ರ ಸಹಜವೇ? —ಎಂದು ವಿಚಾರಿಸಿದಲ್ಲಿ, ತನ್ನ ತಮ್ಮನಾದ ಲಕ್ಷ್ಮಣನಿಂದ ಸೇವೆಹೊಂದುತ್ತಿರುವ ಶ್ರೀರಾಮನು ಸುಗ್ರೀವ ವಿಭೀಷಣರನ್ನು ಅನುಮೋದಿಸುತ್ತ, ಅವರ ಅಣ್ಣಂದಿರಾದ ವಾಲಿರಾವಣರ ಮೇಲೆ ಅಭಿಯೋಗವನ್ನು ಮಾಡಿದ ಕೌಟಿಲ್ಯವೂ, ವಾಲಿಸುಗ್ರೀವರು ಹೋರಾಡುತ್ತಿರುವಾಗ ಮರದಮರೆಯಲ್ಲಿದ್ದು ವಾಲಿಯನ್ನು ಹೊಡೆದ ಕೌಟಿಲ್ಯವೂ, ಪೂತನೆಯ ಹನನ ಮೊದಲುಗೊಂಡು ದುರ್ಯೋಧನನ ಸಂಹಾರದ ವರೆಗೂ ಶ್ರೀಕೃಷ್ಣನು ಆಚರಿಸಿದ ಕೌಟಿಲ್ಯವೂ, ಭೀಷ್ಮ, ದ್ರೋಣ, ಕರ್ಣ ಇವರ ಸಂಹಾರಕ್ಕಾಗಿ ಆಚರಿಸಲ್ಪಟ್ಟ ಶಿಖಂಡಿ ಯುಧಿಷ್ಠಿರ, ಧನಂಜಯರ ಕೌಟಿಲ್ಯವೂ, ಪ್ರತಿಯುದ್ಧದಲ್ಲಿಯೂ ಅಲಗ್ಝಾಂಡರು ವಿನಿಯೋಗಿಸಿದ ಕೌಟಿಲ್ಯವೂ, ಸೀಜರ್ ಆಗಸ್ಟಸ್, ಇವರ ಕೌಟಿಲ್ಯವೂ, ಮಹಮ್ಮದ್ ಘೋರಿ, ಅಲ್ಲಾಉದ್ದೀನ್, ಬಾಬರ್, ಔರಂಗಜೇಬ್ ಇವರ ಕೌಟಿಲ್ಯವೂ, ಕ್ಲೈವ್, ಹೇಸ್ಟಿಂಗ್ಸ್ ಇವರ ಕೌಟಿಲ್ಯವೂ, ನೆಪೋಲಿಯನನ ಕೌಟಿಲ್ಯವೂ, ಬಿಸ್ಮಾರ್ಕನ ಕೌಟಿಲ್ಯವೂ, ಈಸಮಸ್ತ ಕೌಟಿಲ್ಯರ ಕ್ರೌರ್ಯವನ್ನು ನೋಡಲಾಗಿ, ಧರ್ಮಾಸಕ್ತರಿಗೆ ಪೂರ್ಣವಾಗಿ ಗರ್ಹಣೀಯವಾದ ಕೌಟಿಲ್ಯವು ರಾಜನೀತಿಯಲ್ಲಿ ಹೆಚ್ಚಾಗಿ ಕಂಡುಬರುತ್ತಿದೆಯೆಂದು ಹೇಳಬೇಕಾಗಿದೆ. ಇದೆಷ್ಟೋ ವಿಚಾರಕರವಾಗಿದೆ.

"ಚಾಣಕ್ಯನ ಅಂತರಂಗ ಜೀವಿತವು ಅತಿ ಶ್ಲಾಘನೀಯವು. ತೀವ್ರ ನಿತ್ಯಾಚಾರಾನುಷ್ಠಾನಗಳನ್ನೂ ಯಾವಜ್ಜೀವ ಬ್ರಹ್ಮಚರ್ಯಾವಲಂಬನವನ್ನೂ ಉಳಿದು,

---

ವೆಂದು ಭಾವಿಸಿದ ಫ್ರೆಡರಿಕನ ಕೋಮಲತೆಯೇ, ಅತ್ಯಂತ ಪ್ರಾಣನಷ್ಟದೊಡನೆ ಜಯಸಂಪಾದನೆಯನ್ನು ಮಾಡಿದ ನೆಪೋಲಿಯನನ ಕ್ರೌರ್ಯಕ್ಕಿಂತಲೂ ಅಧಿಕ ಶ್ಲಾಘನೀಯವೆಂದು ಅಭಿಪ್ರಾಯಪಟ್ಟಿರುವನು.

ಮಿಕ್ಕ ಅಂಶಗಳಲ್ಲೆಲ್ಲ ತಾತ್ಕಾಲಿಕನಾದ ಅರಿಸ್ಟಾಟಲ್ ಎಂಬ ಹೆಸರುಳ್ಳ ಅಲೆಗ್ಝಾಂಡರನ ಗುರುವಿನಂತೆ ಉಗ್ರಶಿಕ್ಷಕನು. ಅವನ ಮನೆಯಲ್ಲಿ ಸಮಸ್ತ ಅಲಂಕಾರಾಡಂಬರಗಳೂ ವರ್ಜಿತವಾಗಿದ್ದುವು. ಆತನು ಜಿತೇಂದ್ರಿಯನೂ ಸುಖದುಃಖಗಳಲ್ಲಿ ಉದಾಸೀನನೂ ಆಗಿದ್ದನು. ಚಿರಕಾಲ ಬದುಕಿದ್ದು ವಾರ್ಧಕದಲ್ಲಿ ಪ್ರಾಚೀನಾಚಾರಾನುಸಾರನಾಗಿ ಅರಣ್ಯನಿವಾಸಿಯಾದನು. ಈ ಪ್ರಸಿದ್ಧ ಮಹಾತ್ಮನ ಚರಿತ್ರವನ್ನು ನೋಡುವಲ್ಲಿ ಅತಿ ಮಹೋನ್ನತ ದಶೆಯಲ್ಲಿಯೇ ಸರ್ವಸಂಗಪರಿತ್ಯಾಗಕ್ಕೆ ಪ್ರಮಾಣವಾಗಿದ್ದುದರಿಂದ, ಬ್ರಾಹ್ಮಣಭಾವವೂ ಅಂತಹುದೇ ಆಗಿರಬೇಕೆಂದು ಶಾಸಿಸಿದವನು. ಸಾರ್ವಭೌಮಾಧಿಕಾರೈಶ್ವರ್ಯಗಳು ಆತನ ಆಜ್ಞೆಯೊಳಗಿದ್ದರೂ, ಅವೆಲ್ಲವನ್ನೂ ಸಾತ್ವಿಕವಾದ ಔದಾಸೀನ್ಯದಿಂದ ನೋಡುವವನು. ಆತನ ಸಮಸ್ತ ಕೃತ್ಯಗಳನ್ನೂ ಪರಿಶೀಲಿಸಿದಲ್ಲಿ, ಸಮಸ್ತ ಕಲಾಶಾಸ್ತ್ರಾಧಿಕಾರಿಯೂ ಕಲ್ಪನಾ ಕೌಶಲ ಸಂಪನ್ನನೂ ಅರಿಸ್ಟಾಟಲನಂತೆಯೇ ಸರ್ವ ಶಿಷ್ಯರನ್ನೂ ತನ್ನನ್ನೇ ಅನುಸರಿಸುವಂತೆ ವಾಂಛಿತಗಳನ್ನು ನಿಯಮಿಸಲು ಯತ್ನಿಸಿದವನೂ ಆಗಿರುವಂತೆ ಕಂಡು ಬರುವನು.'' *

ಚಾಣಕ್ಯನಿಗೆ 'ಬಂಡದಂತ' ನೆಂಬ ಅವಹೇಳನನಾಮವೂ ಇರುವುದಂತೆ! ಅದೇಕೆಂದರೆ, ಆತನ ತಾಯಿಯು ಮುಂಬದಿಯ ಹಲ್ಲನ್ನು ಕೀಳಹೇಳಲು, ಮಾತೃವಿಧೇಯತೆಗೆ ಕೊರತೆಯಿಲ್ಲದೆ ಹಾಗೆ ಮಾಡಿಕೊಂಡನಂತೆ! ಆದುದರಿಂದ ಈ ಮಾತೃಭಕ್ತಿಯಲ್ಲಿ ಅರಿಸ್ಟಾಟಲನಿಗಿಂತಲೂ ಆತನ ಶಿಷ್ಯನಾದ ಅಲೆಗ್ಝಾಂಡರನಿಗಿಂತಲೂ ಹೆಚ್ಚಿನ ಶ್ಲಾಘನೆಗೆ ಪಾತ್ರನೆಂದೆಣಿಸಲ್ಪಡತಕ್ಕವನು.



## ರಾಕ್ಷಸನು.

ಚಂದ್ರಗುಪ್ತ ಚಾಣಕ್ಯರ ತರುವಾಯ ರಾಕ್ಷಸನೇ ಮುಖ್ಯಪುರುಷನು. ಆದರೂ ಈತನ ಚರಿತ್ರೆಯನ್ನು ಬರೆವುದಕ್ಕೆ ಚಾರಿತ್ರಿಕಲಬ್ಧವಾದ ಆಧಾರಗಳಾವುವೂ ಕಂಡುಬರುವುದಿಲ್ಲ. ಮುದ್ರಾರಾಕ್ಷಸಕಥೆಯನ್ನು ಬರೆವಲ್ಲಿ ಮೂರನೆಯ ಪ್ರಕರಣದಲ್ಲಿ ರಾಕ್ಷಸನ ಬುದ್ಧಿಚಾತುರ್ಯವನ್ನೂ ಸ್ವಾಮಿಭಕ್ತಿಯನ್ನೂ ವಿಶದಗೊಳಿಸುವ ಅಂಶಗಳು ಹೇಳಲ್ಪಟ್ಟಿವೆ. ಇದುವರೆಗೆ ಚಾಣಕ್ಯಚರಿತ್ರೆಯನ್ನು ಬರೆವಾಗ ರಾಕ್ಷಸನ ವಯಸ್ಸನ್ನು ಕುರಿತು ಕೆಲವುಮಟ್ಟಿಗೆ ಚರ್ಚಿಸಿ ಇರುವೆವು.

* ಬುವನ ಚಂದ್ರದತ್ತ.

ಈ ರಾಕ್ಷಸನು ನಂದವಂಶಕ್ಕೆ ಮೊದಲಿಂದಲೂ ಮಂತ್ರಿಯಾಗಿದ್ದು, ಆ ಮೈತ್ರಿಯಿಂದ ಆ ವಂಶವನ್ನು ನಿಲ್ಲಿಸುವುದಕ್ಕೆ ಮಹಾಸಾಹಸದಿಂದ ಪ್ರಯತ್ನಿಸಿದ ಅನನ್ಯಸಾಮಾನ್ಯ ಸ್ವಾಮಿಭಕ್ತನು. ವಿಧಿವಶದಿಂದ ಆತನ ಉಪಾಯಗಳಾವುವೂ ಫಲಿಸಲಿಲ್ಲ. ಕಷ್ಟಪರಂಪರೆಗಳು ಎಷ್ಟೆಲ್ಲ ಇದಿರುಬಂದರೂ ಹೆಂಡಿರುಮಕ್ಕಳು ಕಷ್ಟಕ್ಕೊಳಗಾಗಿದ್ದರೂ ತನಗೆಷ್ಟು ಅಪಾಯಗಳು ಬಂದರೂ ಹಿಂದೆಗೆಯದೆ, ಕಾರ್ಯವು ಸಾಗದಷ್ಟುಕಾಲ ಧೈರ್ಯದಿಂದ ಸ್ವಾಮಿಗಾಗಿ ಕೆಲಸಮಾಡಿದ ಮಹಾವೀರನಲ್ಲವೇ ಇವನು ! ಚಾಣಕ್ಯನೇ ಈತನನ್ನು ಕುರಿತು—

"ಐಶ್ವರ್ಯಾದನಪೇತ ಮೀಶ್ವರಮಯಂ ಲೋಕೋರ್ಥತಃ ಸೇವತೇ |
ತಂ ಗಚ್ಛಂತ್ಯನುಯೇ ವಿಪತ್ತಿಷು ಪುನಸ್ತೇ ತ್ಪ್ರತಿಷ್ಠಾಶಯಾ ]
ಭರ್ತುರ್ಯೇ ಪ್ರಲಯೇಪಿ ಪೂರ್ವಸುಕೃತಾಸಂಗೇನ ನಿಃಸಂಗಯಾ |
ಭಕ್ತ್ಯಾ ಕಾರ್ಯಧುರಂ ವಹಂತಿ ಬಹವ ಸ್ತೇದುರ್ಲಭಾಸ್ತ್ವಾದೃಶಾ ||

ಎಂದು ಹೇಳಿರುವನು. ಇದಕ್ಕಿಂತ ಹೆಚ್ಚಾಗಿ ಬರೆವುದಕ್ಕೆ ಸಾಧ್ಯವಿಲ್ಲದುದಕ್ಕಾಗಿ ಎಷ್ಟೋ ಚಿಂತಿಸಬೇಕಾಗಿದೆ.



## ಅಲಕಸುಂದರುನ (ಅಲೆಗ್ಝಾಂಡರು.)

ಈತನನ್ನು ಚಂದ್ರಗುಪ್ತನ ಸಮಕಾಲಿಕನೆಂದು ಹೇಳುವುದು ಅಷ್ಟೊಂದು ಸಮಂಜಸವಲ್ಲವಾದರೂ, ಸೆಲ್ಯೂಕಸನ ರಾಜ್ಯದೊಡನೆ ಈತನಿಗೆ ವಿಶೇಷ ಸಂಬಂಧವಿದ್ದುದರಿಂದಲೂ, ಈತನು ಭಾರತವರ್ಷದ ಮೇಲೆ ದಂಡೆತ್ತಿಬಂದಾಗ ಚಂದ್ರಗುಪ್ತನು ಈತನನ್ನು ಸಂದರ್ಶಿಸಿದಂತೆ ಹೇಳಲ್ಪಟ್ಟಿರುವುದರಿಂದಲೂ, ಈತನ ಚರಿತ್ರೆಯು ಆಗಳಿನ ಪಾಶ್ಚಾತ್ಯ ಪ್ರಪಂಚ ಪರಿಜ್ಞಾನಕ್ಕೆ ಅತಿ ಮುಖ್ಯವಾದುದರಿಂದಲೂ ಇಲ್ಲಿ ಅದನ್ನು ಸಂಕ್ಷೇಪವಾಗಿ ವರ್ಣಿಸುವೆವು.

ಈತನು ಗ್ರೀಸುದೇಶಕ್ಕೆ ಉತ್ತರದಲ್ಲಿರುವ ಮೆಕಡೋನಿಯಾರಾಜ್ಯಕ್ಕೆ ಪ್ರಥಮ ಚಕ್ರವರ್ತಿಯಾಗಿದ್ದ ಫಿಲಿಪ್ಪನ ಮಗನು. ತಾಯಿಯ ಹೆಸರು ಒಲಿಂಪಿಯ. ಅಲೆಗ್ಝಾಂಡರನು ಜನ್ಮವೆತ್ತಿದ ಮುಹೂರ್ತವು ಸುಮುಹೂರ್ತವು. ಫಿಲಿಪ್ಪನಿಗೆ ಆಗಲೇ ಮೂರು ಶುಭವಾರ್ತೆಗಳು ಒಟ್ಟಾಗಿ ಬಂದು ಸೇರಿದುವು. ಆತನ ಸೇನಾನಿಯು ಒಂದುಕಡೆ ಮಹಾಯುದ್ಧದಲ್ಲಿ ವಿಜಯಿಯಾದನೆಂತಲೂ, ಕುದುರೆಯು ಮೇಲಾಟದಲ್ಲಿ ಗೆದ್ದಿತೆಂತಲೂ, ಮಗನು ಹುಟ್ಟಿದನೆಂತಲೂ ಒಂದೇಬಾರಿಗೆ ಗೊತ್ತಾದುದೂ, ಆತನ ಕಿವಿಗಳಿಗೆ ಹಬ್ಬವನ್ನುಂಟುಮಾಡಿತು. ಕ್ರಿ.ಪೂ.೩೫೬ನೆಯ

ಸಂವತ್ಸರದ ಜೂಲೈ ತಿಂಗಳ ೬ನೇ ತಾರೀಖಿನಿಂದ ಅಲೆಗ್ಝಾಂಡರನು ದಿನೇ ದಿನೇ ವರ್ಧಮಾನನಾಗುತ್ತಿದ್ದನು. ಮೊದಲಿಂದಲೂ ಆತನಿಗೆ ದೇಹದಮೇಲೆ ಅಭಿಮಾನವು ವಿಶೇಷವಾಗಿರಲಿಲ್ಲ. ಯಾವಾಗಲೂ ಉತ್ತಮಾದರ್ಶಗಳಲ್ಲಿಯೇ ಆತನ ದೃಷ್ಟಿಯು ನಿಲ್ಲುತ್ತ ಬಂದಿತು. ಎಲ್ಲ ತರುಣರಿಗೂ ಆದರಣೀಯವಾದ ಒಲಿಂಪಿಯಾ ಪಂದ್ಯಗಳಿಗೆ ಈತನನ್ನು ಹುರಿಗೊಳಿಸಿದಲ್ಲಿ; "ನನ್ನೊಡನೆ ಪಂದ್ಯಕ್ಕೆ ಕಿರೀಟಧಾರಿಗಳೇ ಬಂದಲ್ಲಿ, ನಾನು ಪಂದ್ಯಕ್ಕೆ ಹೋಗುವೆನು" ಎಂದು ಹೇಳಿದ ನಂತೆ. ಫಿಲಿಪ್ಪನು ನೂತನವಾಗಿ ವಿಜಯವನ್ನು ಹೊಂದಿದನೆಂತಲೂ, ಸ್ವಲ್ಪ ರಾಜ್ಯವನ್ನು ಕೈವಶ ಮಾಡಿಕೊಂಡನೆಂತಲೂ, ಕೇಳಿದಾಗಲೆಲ್ಲ, ಅಲೆಗ್ಝಾಂಡ ರನು ಸಂತೋಷಗೊಳ್ಳುವುದಕ್ಕೆ ಬದಲಾಗಿ, ತನ್ನ ಪ್ರತಾಪವನ್ನು ಪ್ರಕಟಿಸುವುಕ್ಕೆ ಸಂದರ್ಭಗಳು ತಗ್ಗುತ್ತ ಬರುವುವಲ್ಲವೇ ಎಂದು ಚಿಂತಿಸುತ್ತಿದ್ದನಂತೆ!

ಇಂತಹ ತೇಜೋವಂತನಾದ ಈ ಬಾಲಕನು ಕಾರ್ಯಗಳಲ್ಲಿ ತನ್ನ ಪ್ರತಿಭೆ ಯನ್ನು ತೋರಿಸದಿರಲಿಲ್ಲ. ಫಿಲಿಪ್ಪನಿಲ್ಲದ ವೇಳೆಯಲ್ಲಿ ಪಾರಸೀಕದೇಶದಿಂದ ರಾಯಭಾರಿಗಳು ಕೆಲವರು ಆತನ ನಗರಕ್ಕೆ ಬಂದರು. ಆಗ ಅಲೆಗ್ಝಾಂಡರನು ಅವರಿಗೆ ಉಚಿತಮರ್ಯಾದೆಯಿಂದ ಸ್ವಾಗತವಿತ್ತು ಅವರಿಂದ ಆಯಾ ದೇಶಗಳ ಸ್ಥಿತಿಗತಿಗಳನ್ನೂ ವ್ಯಾಪಾರಗಳನ್ನೂ ಅಲ್ಲಿಯ ಮಾರ್ಗಗಳನ್ನೂ ಪ್ರಭುತ್ವದ ಪದ್ಧ ತಿಗಳನ್ನೂ ಅರಿತು ಕೊಂಡನು. ಇದಕ್ಕೆ ಕೆಲವುಕಾಲದ ತರುವಾಯ ಅಲೆಗ್ಝಾಂ ಡರನ ಬುದ್ಧಿಯನ್ನೂ ಧೈರ್ಯವನ್ನೂ ಬಯಲುಗೊಳಿಸುವ ವಿಶೇಷ ಸಂದರ್ಭ ವೊಂದು ಉಂಟಾಯಿತು. ಫಿಲಿಪ್ಪನಿಗೆ ಒಂದು ಹೊಸಕುದುರೆಯು ಬಹುಮಾನ ವಾಗಿ ದೊರೆಯಿತು. ಅದನ್ನು ಸ್ವಾಧೀನಪಡಿಸಿಕೊಂಡು ಸವಾರಿಮಾಡುವುದಕ್ಕೆ ಯಾರಿಗೂ ಸಾಧ್ಯವಾಗಲಿಲ್ಲ. ದೊಡ್ಡವರ ಶ್ರಮಗಳೆಲ್ಲವನ್ನೂ ನೋಡುತ್ತಿದ್ದ ಬಾಲಕನಾದ ಅಲೆಗ್ಝಾಂಡರನು; "ಇವರು ಇದನ್ನು ಸ್ವಾಧೀನಪಡಿಸಿಕೊಳ್ಳಲಾ ರದಿರುವರಲ್ಲವೇ" ಎಂದು ಒಂದೆರಡುಸಾರಿ ತಂದೆಗೆ ಕೇಳಿಸುವಂತೆ ಗೊಣಗಿ ದನು. ಅಷ್ಟರಲ್ಲಿ ಫಿಲಿಪ್ಪನು ತನ್ನಮಗನ ಮಾತುಗಳಿಗೆ ಆಶ್ಚರ್ಯಗೊಂಡು ಕುದುರೆಯ ಮೇಲೆ ಅತನು ಸವಾರಿಮಾಡುವಂತೆ ಹೇಳಿದನು.

ಅಷ್ಟರಲ್ಲಿ ಅಲೆಗ್ಝಾಂಡರನು ಕುದುರೆಯ ನೆರಳು ಅದರ ಮುಂದೆ ಬಾರದಂತೆ ತಿರುಗಿಸಿ, ಅದನ್ನೇರಿ ಓಡಿಸಲಾರಂಭಿಸಿದನು. ಅದಕ್ಕಾಗಿ ಎಲ್ಲರೂ ಆತನನ್ನು ಹೊಗಳಿದರು.

ಅರಿಸ್ಟಾಟಲೆಂಬ ಪ್ರಸಿದ್ಧ ಗ್ರೀಕ ತತ್ವವೇತ್ತನಲ್ಲಿ ಅಲೆಗ್ಝಾಂಡರನು ವಿದ್ಯಾ ಭ್ಯಾಸಮಾಡಿದನು. ನೈಜಶಕ್ತಿಯಿಂದಲೂ, ಗುರುಪ್ರಭಾವದಿಂದಲೂ, ಆತನು ಹದಿ

ನಾರು ವರ್ಷದವನಾದಾಗ, ಫಿಲಿಪ್ಪನು ತಾನು ದೇಶವನ್ನು ಬಿಟ್ಟು ಹೋಗುವ ಸಂದರ್ಭದಲ್ಲಿ, ಅಲೆಗ್ಝಾಂಡರನನ್ನು ತನ್ನ ಪ್ರತಿನಿಧಿಯಾಗಿಟ್ಟು ಹೋಗಿದ್ದನು. ತಂದೆಯು ಒಂದು ದಂಡಯಾತ್ರೆಗೆ ಹೋದಾಗ, ಮೆಡಾರಿ ಜಾತಿಯವರು ಫಿಲಿಪ್ಪನ ಮೇಲೆ ತಿರುಗಿಬಿದ್ದು ದಂಗೆಯೆದ್ದರು. ಹುಡುಗನಾದರೂ, ಅಲೆಗ್ಝಾಂಡರನು ಅವರ ಮೇಲೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿ, ತನ್ನ ಹೆಸರಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದನು. ತರುವಾಯ ತಂದೆಯೊಡನೆ ಯುದ್ಧಭೂಮಿಗೆ ಹೋಗಿ ಕೆರೋನಿಯ ಯುದ್ಧವೆಂದು ಹೆಸರುಗೊಂಡ ಸಮರದಲ್ಲಿ ಮುಖ್ಯನಾಗಿ ಕೆಲಸಮಾಡಿದನು. ಫಿಲಿಪ್ಪನು ಮಗನನ್ನು ಹೆಚ್ಚಾದ ಗೌರವದಿಂದ ನೋಡುತ್ತ ಬಂದನು.

ಅದರೆ ಇದು ಬಹಳಕಾಲ ನಡೆಯಲಿಲ್ಲ. ವಯಸ್ಸು ಮೀರಿದ್ದರೂ ಫಿಲಿಪ್ಪನು ಮೋಹಾವೇಶದಿಂದ ಎರಡನೆಯ ಹೆಂಡತಿಯನ್ನು ಮದುವೆಯಾದನು. ಅದರಿಂದ ಗೃಹಕಲ್ಲೋಲಗಳುಂಟಾಗಿ ಅಲೆಗ್ಝಾಂಡರನು ದೇಶತ್ಯಾಗಿಯಾಗಿ ತಲೆಯಡಗಿಸಿಕೊಳ್ಳಬೇಕಾಗಿ ಬಂದಿತು. ಒಬ್ಬ ಸ್ನೇಹಿತನ ಮಧ್ಯವರ್ತಿತ್ವದಿಂದ ಆತನು ತಿರುಗಿ ತಂದೆಯ ಹತ್ತಿರಕ್ಕೆ ಸ್ನೇಹಭಾವದಿಂದ ಬಂದು ಸೇರಿದನು. ಆ ಬಳಿಕ ಸ್ವಲ್ಪಕಾಲದ ಮೇಲೆ, ಅನ್ಯಾಯವನ್ನು ಹೊಂದಿ ಕ್ರುದ್ಧನಾಗಿದ್ದ ಪೌರನೊಬ್ಬನು ಫಿಲಿಪ್ಪನನ್ನು ಕೊನೆಮುಟ್ಟಿಸಿದನು. ಆಗ ಅಲೆಗ್ಝಾಂಡರರು ಕ್ರಿ. ಪೂ. ೩೩೬ರಲ್ಲಿ ಸಿಂಹಾಸನವೇರಿದನು. ಹಿಂದೆಯೇ ಫಿಲಿಪ್ಪನ ಸಾಮ್ರಾಜ್ಯದಲ್ಲೆಲ್ಲ ದಂಗೆಗಳು ತಲೆದೋರಿ, ರಾಜ್ಯವಿಚ್ಛೇದವಾಗುವಂತೆ ಕಂಡುಬಂದಿತು. ಗ್ರೀಕ ಪಟ್ಟಣಗಳಾದ ಅಥೆನ್ಸು ಥೀಬ್ಸುಗಳು ಯುದ್ಧಕ್ಕೆ ಸಿದ್ಧವಾದುವು. ಅಲೆಗ್ಝಾಂಡರನು ಎಲ್ಲರನ್ನೂ ಸಾಹಸದಿಂದ ಇದಿರಿಸಿ ಸೋಲಿಸಿದನು. ಗ್ರೀಕ್‌ಪಟ್ಟಣ ರಾಜ್ಯಗಳೆಲ್ಲವೂ, ಈತನನ್ನು ತಮ್ಮ ನಾಯಕ ಶಿಖಾಮಣಿಯಾಗಿ ಎಣಿಸಿಕೊಂಡು ತಮಗೂ ಪಾರಸೀಕ ಪ್ರಭುವಾದ ಡೇರಯುಸ್ಸಿಗೂ ನಡೆಯುತ್ತಿದ್ದ ಯುದ್ಧಕ್ಕೆ ಈತನನ್ನು ನಿಯಮಿಸಿದುವು. ಸುಮಾರು ಈ ಸಮಯದಲ್ಲಿ ಒಂದು ವಿಚಿತ್ರವಾದ ಉಪಾಖ್ಯಾನವು ಜರುಗಿದಂತೆ ತಿಳಿಯಬರುತ್ತಿದೆ. ಗ್ರೀಕು ಪಟ್ಟಣಗಳು ಅಲೆಗ್ಝಾಂಡರನನ್ನು ತಮ್ಮ ನಾಯಕನೆಂದು ಎಣಿಸಿಕೊಳ್ಳುವಸಮಯದಲ್ಲಿ, ದೇಶದ ಪ್ರಮುಖರೆಲ್ಲರೂ ಬಂದಿದ್ದರು. ಸೈನೋಪ್‌ಪಟ್ಟಣಕ್ಕೆ ಸೇರಿದ 'ಡಯೋಜನಿಸ್' ಎಂಬ ತತ್ವಶಾಸ್ತ್ರವೇತ್ತನೊಬ್ಬನು ಮಾತ್ರ ಬಂದಿರಲಿಲ್ಲ. ಏಕೆ ಬಾರದಿರುವನೋ ನೋಡೋಣವೆಂದು ಅಲೆಗ್ಝಾಂಡರನು ಪಯಣವಾಗಿ ಹೋದನು. ಆಗ ಡಯೋಜನಿಸು ಬಿಸಿಲಲ್ಲಿ ಬಿದ್ದು ಹೊರಳಾಡುತ್ತಿದ್ದನು. ಜನರು ಗುಂಪುಕೂಡಿ ಬರುತ್ತಿರುವುದನ್ನು ನೋಡಿ ಅವನು ತಲೆಯೆತ್ತಿ ನೋಡಿದನು. ಅಷ್ಟರಲ್ಲಿ ಅಲೆಗ್ಝಾಂಡರನು ಅವನನ್ನು ಸಮೀಪಿಸಿ; ''ಅಯ್ಯಾ, ತಮಗೆ ನಾನಾವ ವಿಧದಿಂದಲಾದರೂ

ಉಪಯೋಗಕ್ಕೆ ಬೀಳುವಂತಿರುವೆನೇ ?" ಎಂದು ಕೇಳಲು—"ನೀನು ಸೂರ್ಯ ರಶ್ಮಿಗೆ ಅಡ್ಡಲಾಗಿ ನಿಲ್ಲದಿದ್ದರೆ ಸಾಕು" ಎಂದು ಪ್ರತ್ಯುತ್ತರವನ್ನು ಕೊಟ್ಟನಂತೆ ! ಅದನ್ನುಕೇಳಿ, ಅಲೆಗ್ಝಾಂಡರನು ಆತನ ಸ್ವಾತಂತ್ರ್ಯಕ್ಕೆ ಮೆಚ್ಚಿ; "ನಾನು ಅಲೆಗ್ಝಾಂಡರನಲ್ಲದಿದ್ದರೆ ಡಯೋಜನಿಸು ಆಗಲು ಇಷ್ಟಪಡುತ್ತಿದ್ದೆನು"—ಎಂದು ಹೇಳಿದನು. ಇದರಿಂದ ಅಲೆಗ್ಝಾಂಡರನು ಎಷ್ಟು ನಮ್ರತೆಯುಳ್ಳವನೋ ವಾಚಕರೇ ತಿಳಿದುಕೊಳ್ಳಬಹುದು.

ಗ್ರೀಕ ಪಟ್ಟಣಗಳಿಂದ ತಮ್ಮ ನಾಯಕ ಶಿಖಾಮಣಿಯೆಂದೆನಿಸಲ್ಪಟ್ಟ ಅಲಿಗ್ಝಾಂಡರನು ಡೇರಯಸನ ಮೇಲೆ ದಂಡೆತ್ತಿಹೋದನು. ಈಗ ನಮ್ಮಂತೆಯೇ ಆಗಿನ ಕಾಲದಲ್ಲಿ ಗ್ರೀಕರು ಮೊದಲಾದವರು ಕೂಡ ಶಕುನಗಳಲ್ಲಿ ಹೆಚ್ಚಿನ ನಂಬುಗೆಯನ್ನಿಡುತ್ತಿದ್ದರು. ಆ ನಂಬಿಕೆಗಳಿಂದ ಈಗ ನಮಗೆ ಕಾರ್ಯಭಂಗವುಂಟಾಗುವಂತೆಯೇ, ಅವರಿಗೂ ಕಾರ್ಯಭಂಗವುಂಟಾಗುತ್ತಿದ್ದಿತು. ಅಲೆಗ್ಝಾಂಡರನು ಮಾತ್ರ ಅಂತಹ ನಂಬಿಕೆಗಳ ಆತಂಕಕ್ಕೆ ನಿಂತವನಲ್ಲ. ಶಕುನಗಳು ತನ್ನನ್ನನುಸರಿಸುವಂತೆ ಮಾಡಿದನಲ್ಲದೆ ತಾನು ಶಕುನಗಳನ್ನು ಅನುಸರಿಸಲಿಲ್ಲ. ಹೀಗೆ ಮಹಾಶಕ್ತಿಯಿಂದ ಕಾರ್ಯಗಳನ್ನು ನೆರವೇರಿಸಿ ಶತ್ರುಗಳ ದೇಶಕ್ಕೆ ಹೋಗಿ ಅವರನ್ನು ರಣರಂಗದಿಂದೋಡಿಸಿ, ಅವರ ದೇಶದ ಬಹುಭಾಗವನ್ನು ಆಕ್ರಮಿಸಿಕೊಂಡು, ಯುದ್ಧದಲ್ಲಿ ಸಿಕ್ಕಿದ ಕೊಳ್ಳೆಯನ್ನು ಗ್ರೀಕಪಟ್ಟಣಗಳಿಗೆ ಬಹುಮಾನವಾಗಿ ಕಳುಹಿಸಿದನು. ಗೋರ್ಡ್ಡಿಯಾ ಎಂಬ ಪಟ್ಟಣವನ್ನು ಸ್ವಾಧೀಮಾಡಿಕೊಂಡಾಗ ಅಲ್ಲಿಯ ಜನರು ಒಂದು ರಥವನ್ನು ತೋರಿಸಿ, ಅದರಾಚೆಗೆ ಹಾಕಿದ ಒಂದು ಗಂಟನ್ನು ಬಿಚ್ಚಿದವನು ಲೋಕವನ್ನೆಲ್ಲ ಏಕಚ್ಛತ್ರಾಧಿಪತಿಯಾಗಿ ಆಳುವನೆಂದು ಹೇಳಿದರು. ಆಗ ಅಲೆಗ್ಝಾಂಡರನು ಕತ್ತಿಯನ್ನು ಹಿರಿದು ಆ ಗಂಟನ್ನು ಭೇದಿಸಿದನೆಂದು ಹೇಳುವರು. ಇಂದಿಗೂ ಆಂಗ್ಲೇಯ ಭಾಷೆಯಲ್ಲಿ (ಗೋರ್ಡ್ಡಿಯಳ ಗಂಟನ್ನು ಬಿಚ್ಚುವುದು) ಎಂದರೆ ದೊಡ್ಡ ಸಿಕ್ಕುಸಡಿಲಿಸುವುದು ಎಂಬ ಅರ್ಥದ ಗಾದೆಯಿದೆ. ಈ ಗೋರ್ಡಿಯದ ಗಂಟನ್ನು ಹರಿದು ಹಾಕಿದ ಕಾಲದಲ್ಲಿಯೇ ಅಲೆಗ್ಝಾಂಡರನ ಆರೋಗ್ಯವು ಕೆಟ್ಟಿತು. ಆತನ ರೋಗಕ್ಕೆ ತಕ್ಕ ಔಷಧವನ್ನು ಕೊಡುವವರಾರೂ ಇರಲಿಲ್ಲ. ಆಗ ಫಿಲಿಪ್ಪೆಂಬವನು ಸಾಹಸಮಾಡಿ ಔಷಧವನ್ನು ಕೊಡಲು ಬಂದನು. ಆದರೆ ಅವನು ಕಪಟಿಯೆಂದೂ ಡೇರಯಸನ ಪಕ್ಷಪಾತಿಯೆಂದೂ ಆತನಿಂದ ಔಷಧತೆಗೆದುಕೊಳ್ಳಲಾಗದೆಂದೂ ಅಲೆಗ್ಝಾಂಡರನಿಗೆ ಒಬ್ಬ ಸ್ನೇಹಿತನು ಬರೆದನು. ಅಲೆಗ್ಝಾಂಡರನು ಅದನ್ನು ನೋಡಿಕೊಂಡು, ಫಿಲಿಪ್ಪನು ಔಷಧದ ಬಟ್ಟಲನ್ನು ಕೊಟ್ಟಕೂಡಲೇ ಆ ಕಾಗದವನ್ನು ಆತನಿಗೆ ಕೊಡುತ್ತ ಔಷಧವನ್ನು ಕುಡಿದುಬಿಟ್ಟನು. ಫಿಲಿಪ್ಪನು ವಿಭ್ರಾಂತನಾದನು. ಆಗ ಫಿಲಿಪ್ಪ

ಅಲೆಗ್ಝಾಂಡರರ ಮನಸ್ಸು ಕಳವಳಗೊಂಡ ಭಾವಗಳು ಊಹ್ಯವೇ ಅಲ್ಲದೆ ವರ್ಣನೀಯವಲ್ಲ. ಸ್ವಲ್ಪಹೊತ್ತಿಗೆ ಅಲೆಗ್ಝಾಂಡರನು ಔಷಧದಿಂದ ಆರೋಗ್ಯವನ್ನು ಹೊಂದಿದಾಗ ತನ್ನ ಮೆಕಡೋನಿಯದವರಿಗೆ ಅಮಂದಾನಂದವನ್ನುಂಟುಮಾಡುತ್ತ ಡೇರಯುಸನನ್ನು ಸಂಪೂರ್ಣವಾಗಿ ಓಡಿಸಲು ಹೊರಟನು. ಅಜಾಗರೂಕತೆಯಿಂದ ಡೇರಯುಸನು ಇರುಕುಪ್ರದೇಶದಲ್ಲಿ ಯುದ್ಧಮಾಡಬೇಕಾಗಿ ಬಂದುದರಿಂದ ಅಲೆಗ್ಝಾಂಡರನ ಸೈನ್ಯವು ಸ್ವಲ್ಪವಾಗಿದ್ದರೂ, ಅನಾಯಾಸವಾಗಿ ಪಾರಸೀಕರನ್ನು ಓಡಿಸಿದನು. ಡೇರಯುಸು ಮಾತ್ರ ತಪ್ಪಿಸಿಕೊಂಡು ಹೋದನು. ಅವನ ಹೆಂಡತಿಯೂ ತಾಯಿಯೂ, ಅವಿವಾಹಿತರಾದ ಇಬ್ಬರು ಕನ್ಯೆಯರೂ ಅಲೆಗ್ಝಾಂಡರನಿಗೆ ಸೆರೆಸಿಕ್ಕಿದರು. ಅವರಿಗೆ ಈತನು ತೋರಿದ ಮರ್ಯಾದೆಯಿಂದ ಈತನು ಡೇರಯುಸನಿಂದಲೇ ಹೊಗಳಲ್ಪಡತಕ್ಕವನಾದನು. ಆ ಯುವತಿಯರಿಗೆ ಅಲೆಗ್ಝಾಂಡರನು, ರಾಜವನಿತೆಯರಿಗೆ ತಕ್ಕ ಸದುಪಾಯಗಳೆಲ್ಲವನ್ನೂ ಉಂಟುಮಾಡಿದನು. ಪುರುಷರಾರೂ ಅವರು ವಾಸವಾಗಿದ್ದ ಕಡೆಗೆ ಹೋಗಕೂಡದೆಂಬ ಶಾಸನವನ್ನುಮಾಡಿ ಅವರಿಗೆ ಯಾವ ಲೋಪವೂ ಬಾರದಂತೆ ಕಾಪಾಡಿದನು. ಡೇರಯುಸನೊಬ್ಬನು, ಮಾತ್ರ ಇಲ್ಲವೆಂಬುದಲ್ಲದೆ ಅವರಿಗೆ ಡೇರಯುಸನ ನಗರಕ್ಕಿಂತಲೂ ಅಲೆಗ್ಝಾಂಡರನ ನಗರದಲ್ಲಿಯೇ ಹೆಚ್ಚಿನ ಸೌಖ್ಯವನ್ನುಂಟುಮಾಡಿದನು. ಸೆರೆಹಿಡಿಯಲ್ಪಟ್ಟ ಕೆಲವು ತಿಂಗಳಿಗೆ ಡೇರಯುಸನ ಹೆಂಡತಿಯು ಗರ್ಭಸ್ರಾವದಿಂದ ಮೃತಿಹೊಂದಳು. ತನ್ನ ಉದಾರಹೃದಯವನ್ನು ಡೇರಯುಸನಲ್ಲಿ ತೋರಿಸಲು ಸಂದರ್ಭವಿಲ್ಲವೆ ಹೋಯಿತಲ್ಲವೇ! ಎಂದು ವ್ಯಸನಪಡುತ್ತ, ಅಲೆಗ್ಝಾಂಡರನು ಆಕೆಗೆ ಮಹಾವೈಭವದಿಂದ ಉತ್ತರಕ್ರಿಯೆಗಳನ್ನು ಮಾಡಿಸಿದನು. ಇದನ್ನು ಕೇಳಿ ಡೇರಯುಸನು ವಿಕಲಮನಸ್ಕನಾದನು. ಆದರೆ ಆತನ ಹೆಂಡತಿಯೊಡನೆ ಸೆರೆಸಿಕ್ಕಿ, ಆಕೆಯ ಹತ್ತಿರಲೇ ಅಲೆಗ್ಝಾಂಡರನಿಂದ ಸೇವಕನಾಗಿ ನಿಯಮಿಸಲ್ಪಟ್ಟು, ಆಕೆಯ ಮರಣಾನಂತರ ತಪ್ಪಿಸಿಕೊಂಡು ಹೋಗಿ ಡೇರಯುಸನನ್ನು ಸೇರಿದ ಕೊಜ್ಝಾಚರಿಯನೆಂಬವನು ಅಲೆಗ್ಝಾಂಡರನ ನೈರ್ಮಲ್ಯವನ್ನು ಪ್ರಶಂಸಿಸಿ ನಂಬಿಕೆಯಾದ ಸಾಕ್ಷ್ಯವನ್ನು ಹೇಳಿ ಡೇರಯುಸನ ಸಂದೇಹವನ್ನು ಪರಿಹರಿಸಿದನು. ಅಲೆಗ್ಝಾಂಡರನು ಶುದ್ಧಚರಿತ್ರನೆಂದು ಅವನು ದೃಢವಾಗಿ ಹೇಳಿರುವನು.

ಈ ದುಃಖವುಂಟಾದ ಕೆಲವುಕಾಲಕ್ಕೆ ಡೇರಯುಸನಿಗೆ ಅಲೆಗ್ಝಾಂಡರನೊಡನೆ ಘೋರಯುದ್ಧವು ಪ್ರಾಪ್ತವಾಗಿ ಅಪಜಯವುಂಟಾಯಿತು. ಅಂದಿಗೆ ಪಾರಸೀಕ ಸಾಮ್ರಾಜ್ಯವು ಅಂತ್ಯವಾಯಿತು. ಅಲೆಗ್ಝಾಂಡರನಿಗೆ ಗ್ರೀಸು ಮೊದಲುಗೊಂಡು ಭರತವರ್ಷದ ವರೆಗೂ ಇರುವ ಆಸಿಯಾಖಂಡವೂ, ಈಜಿಪ್ತದೇಶವೂ ಒಳಗಾದುವು. ಸ್ವಲ್ಪಕಾಲದಲ್ಲಿಯೇ ಡೇರಯುಸು ಪರಲೋಕವನ್ನು ಸೇರಿದನು.

ಆತನ ಕಳೇಬರವನ್ನು ರಾಜಪುರುಷನ ಕಳೇಬರಕ್ಕೆ ತಕ್ಕ ರೀತಿಯಿಂದ ಮರ್ಯಾದೆಯನ್ನು ತಪ್ಪದೆ, ಸನ್ಮಾನಿಸಿ ದ್ರಾವಕದಲ್ಲಿರಿಸಿ, ಆತನ ತಾಯಿಗೆ ಸಮರ್ಪಿಸುವಂತೆ ಅಲೆಗ್ಝಾಂಡರನು ಏರ್ಪಾಡನ್ನು ಮಾಡಿದನು. ಡೇರಯಸನೊಡನೆ ಯುದ್ಧ ಮಾಡುವಾಗ ಅಲೆಗ್ಝಾಂಡರನು ತೋರಿಸಿದ ಕೆಲವು ಗುಣಗಳು ಪ್ರಶಂಸನೀಯವಾಗಿದ್ದು ಆತನ ಸ್ವಭಾವವನ್ನು ತಿಳಿಯಗೊಡುತ್ತಿವೆ.

ಅರಿಸ್ಟನ್ ಎಂಬ ಸೇನಾನಿಯೊಬ್ಬನು ಶತ್ರುಗಳಲ್ಲೊಬ್ಬನನ್ನು ಕೊಂದು ಅವನ ಶರೀರವನ್ನು ತಂದು ಅಲೆಗ್ಝಾಂಡರನಿಗೆ ಸಮರ್ಪಿಸಿ,—"ಅಯ್ಯಾ, ನಮ್ಮವರಲ್ಲಿ ಇಂತಹ ಸಮರ್ಪಣೆಗೆ ಬಂಗಾರದ ಬಟ್ಟಲು ಬಹುಮಾನವು" ಎಂದು ಹೇಳಿದನಂತೆ. ಅಷ್ಟರಲ್ಲಿ ಅಲೆಗ್ಝಾಂಡರನು "ಬರಿಯ ಬಟ್ಟಲೇಕೆ? ತುಂಬಿದ ಬಟ್ಟಲನ್ನು ಕೊಡುವೆನು" ಎಂದು ಒಂದು ಬಂಗಾರದ ಬಟ್ಟಲಲ್ಲಿ ಮಧುವನ್ನು ತುಂಬಿಸಿ ಕೊಡಿಸಿ, ಆತನನ್ನು ಗೌರವಿಸುವಂತೆ ತಾನೂ ಕುಡಿದನು.

ಒಂದು ದಿನ ಕೇವಲ ಬಡವನಾದೊಬ್ಬ ಮೆಕಡೋನಿಯದವನು ಹೇಸರಗತ್ತೆಯ ಮೇಲೆ ರಾಜನ ದ್ರವ್ಯವನ್ನು ಹೇರಿ ಜೊಕ್ಕಸಕ್ಕೆ ಅಟ್ಟಿಕೊಂಡು ಹೋಗುತ್ತಿದ್ದನು. ಮಾರ್ಗಮಧ್ಯದಲ್ಲಿ ಆ ಹೇಸರಗತ್ತೆಯು ಹೊರಲಾರದೆ ಕೆಳಗೆಬಿದ್ದಿತು; ಆಗ ಆ ಸೇವಕನು ಹಣದ ಗಂಟನ್ನು ಬೆನ್ನಮೇಲಿಟ್ಟು ಹೊರಲಾರದೆ ಹೊತ್ತುಕೊಂಡು ಹೋಗುತ್ತಿದ್ದನು. ಆವೇಳೆಗೆ ಅವನನ್ನು ಅಲೆಗ್ಝಾಂಡರನು ನೋಡಿ, "ಮಿತ್ರನೇ! ನಿಲ್ಲು, ಮುಂದಕ್ಕೆ ಸಾಗಿ ಹೋಗಬೇಡ. ಅದು ನಿನ್ನ ಹಣ. ನಿನ್ನ ಮನೆಗೆ ತೆಗೆದುಕೊಂಡುಹೋಗಿ ನೀನೇ ಉಪಯೋಗಿಸಿಕೊ" ಎಂದು ಹೇಳಿದನು. ಅಹಾ! ಒಂದು ನಿಮಿಷದಲ್ಲಿ ದಾರಿದ್ರ್ಯದಿಂದೆತ್ತಿ ಮಹದೈಶ್ವರ್ಯವನ್ನುಂಟುಮಾಡಿದ ಅಲೆಗ್ಝಾಂಡರನಲ್ಲಿ ಆ ದರಿದ್ರನು ಎಷ್ಟು ಭಕ್ತಿವಿಶ್ವಾಸವುಳ್ಳವನಾಗಿದ್ದನೋ ನಾವರಿಯಲಾಪೆವೇ! ಅಲೆಗ್ಝಾಂಡರನು ಇಷ್ಟರ ಉದಾರಿಯೆಂದಾದರೂ ನಾವೀಗ ಗಣಿಸಲಾಪೆವೇ?

ಒಂದು ಸಂದರ್ಭದಲ್ಲಿ, ಅಲೆಗ್ಝಾಂಡರನ ಸೈನ್ಯವು ಕಡಿದಾದ ನಿರ್ಜಲಪ್ರದೇಶವನ್ನು ದಾಟಿ ಪ್ರಯಾಣಮಾಡಬೇಕಾಗಿ ಬಂದಿತು. ಕೆಲವರು ಮೆಕಡೋನಿಯದವರು ಮಾತ್ರ ಒಂದು ಹಳ್ಳದಿಂದ ಬುದ್ದಲಿಗಳಲ್ಲಿ ನೀರು ತುಂಬಿಸಿಕೊಂಡು ತಮ್ಮ ವಾಹನಗಳಮೇಲೆ ತರುತ್ತಿದ್ದರು. ಅಲೆಗ್ಝಾಂಡರನಿಗೆ ಬಾಯಾರಿಕೆಯುಂಟಾಯಿತು. ಆಗ ಅವರಲ್ಲಿ ಕೆಲವರು ಶಿರಸ್ತ್ರಾಣವೊಂದರಲ್ಲಿ ನೀರನ್ನು ತುಂಬಿಸಿ ಆತನಿಗೆ ಕೊಟ್ಟರು. ಆತನು ಅದನ್ನು ತೆಗೆದುಕೊಂಡು—ಯಾರಿಗಾಗಿ ತೆಗೆದುಕೊಂಡು ಬಂದಿರಿ?—ಎಂದು ಕೇಳಿದನು. ಅವರು: "ನಮ್ಮ ಮಕ್ಕಳಿಗಾಗಿ ತೆಗೆ

ದುಕೊಂಡು ಬರುತ್ತಿರುವೆವು. ನಮ್ಮ ಪ್ರಭುವು ಜೀವಿಸಿದ್ದಲ್ಲಿ ಈಗಿನ ಮಕ್ಕಳು ಹೋದರೂ ನಮಗೆ ಮಕ್ಕಳಿಗೇನೂ ಕಡಿಮೆಯಾಗದು'' ಎಂದರು. ಇಷ್ಟರಲ್ಲಿ ಅಲೆಗ್ಝಾಂಡರನು ಸುತ್ತೂ ನೋಡಲು, ಸೈನಿಕರನೇಕರು ತಲೆಬಗ್ಗಿಸಿ ಆತನ ಕೈಯೊಳಗಣ ನೀರಿನಕಡೆಗೆ ನೋಡುತ್ತಿದ್ದರು. ಅದನ್ನು ಗಮನಿಸಿ ಆತನು: ''ನಾನು ನೀರು ಕುಡಿದರೆ ನನ್ನಂತೆಯೇ ಬಾಯಾರಿಕೆಯಿಂದ ಪೀಡಿತರಾದ ಈ ಸೈನಿಕರು ಅಧೈರ್ಯಗೊಳ್ಳುವರು.'' ಎನ್ನುತ್ತ ನೀರನ್ನು ಹಿಂದಕ್ಕೆ ಕೊಟ್ಟುಬಿಟ್ಟನು. ಆತನ ಔದಾರ್ಯಕ್ಕೂ ತ್ಯಾಗಕ್ಕೂ ಮೆಚ್ಚಿ ಸೈನ್ಯವೆಲ್ಲವೂ ಒಂದೇಸಮನಾಗಿ ಹೆಚ್ಚಿನ ವೇಗದಿಂದ ದಾರಿ ನಡೆಯಿತು.

ಅಲೆಗ್ಝಾಂಡರನು ಭರತವರ್ಷದ ಮೇಲೆ ದಂಡೆತ್ತಿಬರುವುದೇ ಮೊದಲಾದ ವಿಷಯಗಳು ನಾಲ್ಕನೆಯ ಪ್ರಕರಣದಲ್ಲಿ ವಿವರಿಸಲ್ಪಟ್ಟಿವೆ. ಪುನಃ ಇಲ್ಲಿ ಬರವುದು ಅಗತ್ಯವಿಲ್ಲ.

ಡೇರಯುಸನ ಮರಣಾನಂತರದಲ್ಲಿ ಅಲೆಗ್ಝಾಂಡರನು ತನ್ನ ರಾಜ್ಯದಲ್ಲಿ ಸಂಬಂಧಗಳೂ, ಬಾಂಧವ್ಯಗಳೂ ಇದ್ದರೆ ರಾಜ್ಯಸ್ಥೈರ್ಯಕ್ಕೆ ಅನುಕೂಲವಾಗುವುದೆಂದು ತಿಳಿದು, ಪ್ರಾಚೀನ ಪದ್ಧತಿಗಳನ್ನವಲಂಬಿಸಲು ಮೊದಲು ಮಾಡಿಟ್ಟನು. ಭರತವರ್ಷದಿಂದ ತಿರುಗಿಹೋಗುತ್ತ ಸೂಸಾ ಪಟ್ಟಣದ ಹತ್ತಿರ ಮಹಾವೈಭವದಿಂದ ರೊಕ್ಸಾನಾ ಎಂಬ ಪಾರಸೀಕಕನ್ಯೆಯನ್ನು ಮದುವೆಯಾದನು. ತನ್ನ ಮಿತ್ರರಿಗೂ ಬಂಧುಗಳಿಗೂ, ಕೆಳಗಣ ಅಧಿಕಾರಿಗಳಲ್ಲಿ ಅನೇಕರಿಗೂ ಪೂರ್ವದೇಶಗಳಲ್ಲಿಯ ಅನೇಕ ಕನ್ಯೆಯರನ್ನು ವಿವಾಹಮಾಡಿಸಿದನು. ೯೦೦೦ ವಿವಾಹಗಳು ನಡೆದುವು. ತಾನು ಉಡಿಗೆತೊಡಿಗೆಗಳು ಮೊದಲಾದ ವಿಷಯಗಳಲ್ಲಿ ಕೂಡ ಪ್ರಾಚೀನಪದ್ಧತಿಗಳನ್ನೇ ಅನುಸರಿಸುತ್ತಬಂದನು.

ಭರತವರ್ಷದಿಂದ ತಿರುಗಿಹೋಗುತ್ತ ಆತನು ಬಾಬಿಲೋನ್ ಹತ್ತಿರ ಬರುವಾಗ ಚಳಿಜ್ವರ ಬಂದು ಮೃತನಾದನು. (ಕ್ರಿ. ಪೂ. ೩೨೩.)

ಅಲೆಗ್ಝಾಂಡರನು ತನ್ನ ಅಂತಿಮದಶೆಯಲ್ಲಿ ವಿಶೇಷವಾಗಿ ಕುಡಿಯುತ್ತಿದ್ದುದರಿಂದ ಕೆಲವರನ್ನು ಅನ್ಯಾಯವಾಗಿ ಕೊಲ್ಲಿಸಿದಂತೆ ಹೇಳಿಕೆಯಿದೆ. ಎಂತಹವರಿಗಾದರೂ ಕಳಂಕಗಳು ಇದ್ದೇ ಇರುವುವಲ್ಲವೇ!



## ಸೆಲ್ಯೂಕಸನು.

ಅಲೆಗ್ಝಾಂಡರನಿಂದ ಜಯಿಸಲ್ಪಟ್ಟು ಸ್ವಲ್ಪಕಾಲ ಆತನ ಪಾಲನೆಗೊಳಗಾಗಿದ್ದು, ಆತನ ಮರಣಾನಂತರದಲ್ಲಿ ದಿಕ್ಕುಪಾಲಾಗಿ ಚದರಿಹೋಗಿದ್ದ ರಾಜ್ಯಶಕಲ

ಗಳನ್ನು ಚಂದ್ರಗುಪ್ತನು ಭರತಖಂಡದಲ್ಲಿ ಏಕಚ್ಛತ್ರಾಧಿಪತ್ಯದ ಕೆಳಗೆ ತರುತ್ತಿದ್ದ ಕಾಲದಲ್ಲಿಯೇ, ಏಕಚ್ಛತ್ರಾಧಿಪತ್ಯಕ್ಕೆ ತಾನೂ ತರಲು ಪ್ರಯತ್ನಿಸಿ, ಜಯವನ್ನು ಹೊಂದಿ, ಚಂದ್ರಗುಪ್ತನನ್ನು ಇದಿರಿಸಿ ನಿಲ್ಲಲಾರದೆ, ಆತನಿಗೆ ಮಗಳನ್ನು ಕೊಟ್ಟು ಸಖ್ಯವನ್ನು ಮಾಡಿಕೊಂಡ ಮಹಾವೀರನೇ ಈ ಸೆಲ್ಯೂಕಸನು.

ಈತನು ಕ್ರಿ. ಪೂ. ೩೫೮—೩೫೪ರ ಮಧ್ಯಕಾಲದಲ್ಲಿ ಜನಿಸಿದನು. ಈತನು ಸುಮಾರು ಮೂವತ್ತುವರ್ಷದವನಾಗಿದ್ದು, ಆಸಿಯಾಖಂಡದ ಮೇಲೆ ದಂಡೆತ್ತಿಹೋಗುವ ಅಲೆಗ್ಝಾಂಡರನ ಸೈನ್ಯವನ್ನು ಸೇರುವ ತನಕ ಈತನ ಚರಿತ್ರೆಯನ್ನು ನಾವರಿಯೆವು. ಕ್ರಿ. ಪೂ. ೩೨೬ರಲ್ಲಿ ಈತನು ಅಲೆಗ್ಝಾಂಡರನ ಸೈನ್ಯದಲ್ಲಿಯ ಮುಖ್ಯಾಧಿಕಾರಿಗಳಲ್ಲಿ ಒಬ್ಬನಾಗಿ ಕಾಣಿಸಿಕೊಳ್ಳುವನು. ಅಫಘಾನಿಸ್ಥಾನಪ್ರಾಂತದಲ್ಲಿಯ ಪರ್ವತ ಪ್ರದೇಶದಲ್ಲಿ ಅಲೆಗ್ಝಾಂಡರನ ಪ್ರೀತಿಯನ್ನು ಸಂಪಾದಿಸಿದುದರಿಂದ ಆತನಿಂದ ಪ್ರಧಾನಾಧಿಕಾರಿಯಾಗಿ ನಿಯಮಿಸಲ್ಪಟ್ಟನು. ಅಲೆಗ್ಝಾಂಡರ್, ಟಾಲಿಮಿ, ಪರ್ಡಿಕ್ಕಸ್, ಲಾಸಿಮೇಕಸ್ ಇವರೊಡನೆ ಭರತವರ್ಷಕ್ಕೆ ಬಂದು ಪುರುಷೋತ್ತಮನೊಡನೆ ನಡೆದ ಯುದ್ಧದಲ್ಲಿ ಈತನು ಮಹಾವೀರನೆಂದು ಹೆಸರುಗೊಂಡನು. ಹೀಗಾದುದರಿಂದ ಅಲೆಗ್ಝಾಂಡರನಿಗೆ ಈತನ ಮೇಲೆ ಪ್ರೀತಿಯು ಹೆಚ್ಚಾದಂತೆ ತೋರಿಬರುವುದು. ಸೂಸಾ ಪಟ್ಟಣದಲ್ಲಿ ಕ್ರಿ. ಪೂ. ೩೨೪ರಲ್ಲಿ ಜರುಗಿದ ಮಹಾವೈಭವದೊಡಗೂಡಿದ ವಿವಾಹಗಳಲ್ಲಿ, ಅಲೆಗ್ಝಾಂಡರನ ವಿವಾಹಕ್ಕೆ ಎರಡನೆಯದು ಈತನದೇ ಆಗಿ ಶೋಭಿಸಿತು. ಪಾರಸೀಕ ಪ್ರಭುಗಳಲ್ಲಿ ಅಲೆಗ್ಝಾಂಡರನ ಮಾವನೂ, ಈತನ ಮಾವನೂ ಸಮಾನವಾದ ಔನ್ನತ್ಯವುಳ್ಳ ಪ್ರಮುಖರು.

ಬೇಬಿಲೋನಿನಲ್ಲಿ ಕ್ರಿ. ಪೂ. ೩೨೩ರಲ್ಲಿ ಅಲೆಗ್ಝಾಂಡರನು ಪರಲೋಕಗತನಾದ ಮೇಲೆ, ಆತನ ರಾಜ್ಯವೆಲ್ಲವೂ ಅರಾಜಕವಾಯಿತು. ಫ್ರಿಜಿಯಾ ಕ್ಷೇತ್ರಪನಾದ ಅಂಟಿಗೋನಸ್ಸೂ, ಫಿಲಿಪ್ಪಿನ ಸೇನಾನಿಯಾದ ಅಂಟಿಪೇಟರೂ, ಈಜಿಪ್ತು ಕ್ಷೇತ್ರಪನಾದ ಟಾಲಿಮಿಯೂ, ಮೆಕಡೋನಿಯಾ ಪ್ರತಿನಿಧಿಯಾದ ಕ್ರೆಟೆರಸ್ಸೂ, ಸ್ವತಂತ್ರ ರಾಜರಾಗುವುದಕ್ಕೆ ಒಳಸಂಚು ಮಾಡತೊಡಗಿದರು. ಸ್ವಲ್ಪಕಾಲದಲ್ಲಿಯೇ ರೊಕ್ಸಾನಾಳಿಗೆ ಮಗನು ಹುಟ್ಟಿದನು. ಪರ್ಡಿಕ್ಕಾಸನು ಆ ಚಿಕ್ಕ ಅಲೆಗ್ಝಾಂಡರನ ಪಾಲಕನಾದನು. ಇತರ ಕ್ಷೇತ್ರಪರೊಡನೆ ಸೇರಿ ಇದ್ದಲ್ಲಿ ಸೆಲ್ಯೂಕಸನಿಗೂ ಕೂಡಲೇ ರಾಜ್ಯಭಾಗವು ಸಿಕ್ಕುತ್ತಿದ್ದರೂ, ಯಾವ ಕಾರಣದಿಂದಲೋ ಆತನು ಪಾಲಕನ ರಕ್ಷಕ ಸೈನ್ಯಕ್ಕೆ ಅಧ್ಯಕ್ಷನಾಗಿರಲು ಒಪ್ಪಿಕೊಂಡನು. ಆದರೂ ಇದು ಬಹುಕಾಲ ನಡೆಯಲಿಲ್ಲ. ಕ್ರಿ. ಪೂ. ೩೨೧ರಲ್ಲಿ ಅಂಟಿಗೋನಸ್ಸು ಪಾಲಕನ ಆಜ್ಞೆಯನ್ನುಲ್ಲಂಘಿಸಿದುದರಿಂದ ಇವರಿಬ್ಬರಿಗೂ ಯುದ್ಧವು ಪ್ರಾರಂ

ಭವಾಯಿತು. ಕ್ಷೇತ್ರಪರೆಲ್ಲರೂ ಅಂಟಿಗೋನಸನೊಡನೆ ಸೇರಿದರು. ಪರ್ಡಿಕ್ಕಾಸು ಯುದ್ಧವನ್ನು ನಡೆಯಿಸುತ್ತ ಸೈನ್ಯದೊಡನೆ ಈಜಿಪ್ಟು ದೇಶಕ್ಕೆ ಬಂದನು. ಆತನ ಸೈನ್ಯಗಳು ಓಡಿಹೋಗಿ ಆತನು ಪ್ರಾಣವನ್ನರ್ಪಿಸಬೇಕಾಯಿತು. ಬಹುಕಾಲ ದಿಂದಲೂ ಸಂಗತಿಗಳನ್ನು ಲಕ್ಷ್ಯವಿಟ್ಟು ನೋಡುತ್ತಿದ್ದ ಸೆಲ್ಯೂಕಸನು ಸಮಯ ನೋಡಿಕೊಂಡು ಪಾಲಕನನ್ನು ಜರೆದು ಕ್ಷೇತ್ರಪರ ಪಕ್ಷವನ್ನು ಸೇರಿದನು.

ಸಹಪಾಲಕನಾದ ಪರ್ಡಿಕ್ಕಾಸ್ಸು ಮಡಿದ ತರುವಾಯ, ಆಂಟಿಪೇಟರೆಂಬು ವನು ಆತನ ಸ್ಥಾನಕ್ಕೆ ನಿಯಮಿಸಲ್ಪಟ್ಟನು. ಅಲ್ಲಿ ಆತನಿಗೆ ಕೆಲವು ಸಂದಿಗ್ಧ ಗಳು ಬಂದೊದಗಿದುವು. ಸೈನಿಕರಲ್ಲಿ ಕೆಲವರಿಗೆ ಆತನು ಕೊಡಬೇಕಾಗಿದ್ದ ಹಣ ವನ್ನು ಕೊಡುವುದಕ್ಕೆ ಸಂದರ್ಭಗಳು ಆತನಿಗೆ ವ್ಯತಿರೇಕವಾದುವು. ಇದಕ್ಕಾಗಿ ಅವರು ಆತನನ್ನು ಶಿಲಾವರ್ಷದಿಂದ ಕೊಲ್ಲನೋಡಿದರು. ಆಗ ಅವರ ಕೈಯಿಂದ ಆತನನ್ನು ಸೆಲ್ಯೂಕಸನು ತಪ್ಪಿಸಿದನು. ಕೃತಜ್ಞತೆಯನ್ನು ತೋರಿಸುವುದಕ್ಕಾಗಿ ಆತನು ಸೆಲ್ಯೂಕಸನಿಗೆ ಬೇಬಿಲೋನಿಯಾ ದೇಶದ ಪ್ರಭುತ್ವವನ್ನು ಕೊಟ್ಟುಕಳು ಹಿಸಿದನು. ಇದು ಸೆಲ್ಯೂಕಸನಿಗೆ ಬಹಳಕಾಲ ಬಾಳಿಬರಲಿಲ್ಲ. ಅಂಟಿಗೋನಸು ಮಹಾಬಲವಂತನಾದುದರಿಂದ, ಆತನಿಗೂ ಸೆಲ್ಯೂಕಸನಿಗೂ ವೈರವುಂಟಾಯಿತು. ಎಷ್ಟು ಪ್ರಯತ್ನಿಸಿದರೂ ಅಂಟಿಗೋನಸನ್ನು ಸಮಾಧಾನಗೊಳಿಸುವುದು ಅಸಾಧ್ಯ ವಾಯಿತು. ಕ್ರಿ. ಪೂ. ೩೧೭ರಲ್ಲಿ ಸೆಲ್ಯೂಕಸನು ಈಜಿಪ್ಟಿಗೆ ಓಡಿಹೋಗಿ ಟಾಲ ಮಿಾಯ ಶರಣು ಹೊಂದಿದನು. ೩೧೬ರಲ್ಲಿ ರಾಜವಂಶದ ಹೆಸರೇ ಅಳಿದುಹೋಗ ಲಾಗಿ ಆಂಟಿಗೋನಸ್ಸು ಪ್ರಬಲ ಪ್ರಭುವಾಗುವ ಸಂಭವವು ಬಂದಿತು. ಅಷ್ಟರಲ್ಲಿ ಇತರ ಕ್ಷೇತ್ರಪರು — ಈಜಿಪ್ಟಿನಲ್ಲಿ ಟಾಲಿಮಿಾಯೂ, ಆತನನ್ನು ಸೇರಿದ ನಮ್ಮ ಸೆಲ್ಯೂಕಸನೂ, ಮೆಕಡೋನಿಯಾದಲ್ಲಿ ಕಸಾಂಡರು ಮತ್ತು ಲಾಸಿಮೇಕಸೂ— ಇವರೆಲ್ಲರೂ, ಆಂಟಿಗೋನಸನಮೇಲೆ ಈರ್ಷೆಯುಳ್ಳವಳಾಗಿ ವೈರವನ್ನು ತೋರಿಸಿ, ಕ್ರಿ. ಪೂ. ೩೧೫ರಲ್ಲಿ ಕೆಲವು ಸಮಾಧಾನಗಳನ್ನು ಕೇಳಿದರು. ಅದಕ್ಕಾಗಿ ಅವ ರಿಗೂ ಆತನಿಗೂ ಯುದ್ಧವುಂಟಾಯಿತು. ಅದರಲ್ಲಿ ೩೧೫ರಿಂದ ೩೧೨ರ ವರೆಗೂ, ಸೆಲ್ಯೂಕಸ್ಸು ಟಾಲಿಮಿಾಯ ಸೇನಾನಿಗಳಲ್ಲೊಬ್ಬನಾಗಿ ಕೆಲಸ ಮಾಡಿದನು. ಆದರೆ ಆ ವರ್ಷವು ಪ್ರಾರಂಭವಾಗುತ್ತಲೇ ಸೆಲ್ಯೂಕಸನಿಗೆ ಅದೃಷ್ಟವು ಕೈಹಿಡಿಯಲಾರಂ ಭಿಸಿತು. ಆಂಟಿಗೋನಸ್ಸು ಮೆಕಡೋನಿಯದ ಮೇಲೆ ದಂಡೆತ್ತಿ ಹೋಗುವುದರಲ್ಲಿ ದ್ದನು. ಆ ದೌಡನ್ನು ಆತಂಕಪಡಿಸಿ, ಆತನನ್ನು ವಿಫಲ ಮನೋರಥನನ್ನಾಗಿ ಮಾಡಲು ಸೆಲ್ಯೂಕಸನು ಉಪಾಯವನ್ನು ಹುಡುಕಿ, ಆತನ ಮಗನನ್ನು ಪರಾಜಿ ತನನ್ನಾಗಿ ಮಾಡಿ ಆತನ ಸೈನ್ಯಗಳನ್ನೆಲ್ಲ "ಗಾಜಾ" ಯುದ್ಧದಲ್ಲಿ ನುಚ್ಚುನೂ ರಾಗಿ ಮಾಡಿದನು. ಅಷ್ಟರಲ್ಲಿ ಅಂಟಿಗೋನಸ್ಸು ತಾನು ಮಾಡಿದ ಏರ್ಪಾಡುಗಳ

ನ್ನೆಲ್ಲ ಬದಲಾಯಿಸಿಕೊಂಡನು. ಸೆಲ್ಯೂಕಸನ ಶಕವು ಆರಂಭವಾಯಿತು. ಟಾಲಿಮಿಾಯು ೮೦೦ ಪದಾತಿಗಳನ್ನೂ ೨೦೦ ಕುದುರೆಯ ಸವಾರರನ್ನೂ ಕೊಟ್ಟು ಬೇಬಿಲೋನಿಯವನ್ನು ಸ್ವಾಧೀನಪಡಿಸಿಕೊಳ್ಳುನಂತೆ ಸೆಲ್ಯೂಕಸನಿಗೆ ಹೇಳಿದನು. ಇಷ್ಟು ಸ್ವಲ್ಪ ಸೈನ್ಯದಿಂದ ಏನುಮಾಡಬಹುದೆಂದು ಕೆಲವರು ಸೆಲ್ಯೂಕಸನೊಡನೆ ವಾದಿಸತೊಡಗಿದರು. ಆವರೆ ಅಲೆಗ್ಝಾಂಡರನ ದೃಷ್ಟಾಂತವನ್ನು ತೋರಿಸಿಯೂ ವೀರಪುರುಷೋಚಿತ ಧರ್ಮಗಳನ್ನು ಉಪನ್ಯಸಿಸಿಯೂ, ಶಕುನಗಳನ್ನು ಕಾಣಿಸಿಯೂ, ಸೆಲ್ಯೂಕಸನು ತನ್ನ ಸೇನೆಯನ್ನು ಹುರಿಗೊಳಿಸಿ, ಮಾರ್ಗದಲ್ಲಿ ಜಯಹೊಂದುತ್ತ ಬೇಬಿಲೋನನ್ನು ಸೇರಿ ಆಂಟಿಗೋನಸನ ಪಕ್ಷದವರನ್ನು ಸೋಲಿಸಿ ಆ ನಗರವನ್ನು ವಶಮಾಡಿಕೊಂಡನು. ಆದಿನವೇ ಸೆಲ್ಯೂಕಸನ ಸಾಮ್ರಾಜ್ಯದ ಜನ್ಮದಿನವು. ಅಂದಿನಿಂದ ಸೆಲ್ಯೂಕಸನು ತನ್ನ ಸ್ಥಾನವನ್ನು ಬಲಪಡಿಸಿಕೊಳ್ಳಲು ಆರಂಭಿಸಿದನು. ಸ್ವಲ್ಪಕಾಲದಲ್ಲಿಯೇ ಆಂಟಿಗೋನಸನು ತನ್ನ ಕ್ಷೇತ್ರಪನಾದ 'ನಿಕನರ್' ನನ್ನು ೧೦,೦೦೦ ಪದಾತಿಗಳೊಡನೆಯೂ, ೭,೦೦೦ ಅಶ್ವಾರೋಹಿಗಳೊಡನೆಯೂ, ಸೆಲ್ಯೂಕಸನಮೇಲೆ ಕಳುಹಿಸಿದನು. ಸೆಲ್ಯೂಕಸನ ಹತ್ತಿರ ೩೦೦೦ ಪದಾತಿಗಳೂ ೪೦೦ ಕುದುರೆಯ ಸವಾರರೂ ಇದ್ದರು. ಆದರೂ ಸೆಲ್ಯೂಕಸನ ಪ್ರತಿಭೆಯಿಂದ ಈ ಚಿಕ್ಕ ಸೈನ್ಯವು ನಿಕನರನ್ನು ಸಂಪೂರ್ಣವಾಗಿ ಓಡಿಸಿಬಿಟ್ಟಿತು. ಈ ಹೊಡೆತದೊಡನೆಯೇ ಆಂಟಿಗೋನಸನಿಗೆ ಪಶ್ಚಿಮದಲ್ಲಿ ತೊಂದರೆಗಳನ್ನುಂಟುಮಾಡಿದನು. ಆದರೂ ಹೆದರದೆ ಆಂಟಿಗೋಸನು ತನ್ನ ಮಗನಾದ ಡೆಮಿಟ್ರಿಯಸ್ಸನ್ನು ಬೇಬಿಲೋನಿಯದ ಮೇಲೆ ದೊಡ್ಡ ಸೈನ್ಯದೊಡನೆ ಕಳುಹಿಸಿದನು. ಆ ದಂಡು ಕೊಳ್ಳೆಹೊಡೆವುದೊಂದು ಬಿಟ್ಟು ಮತ್ತಾವ ವಿಧವಾದ ಫಲವನ್ನೂ ಹೊಂದಲಿಲ್ಲ. ಸೆಲ್ಯೂಕಸು ಮೆಲ್ಲಮೆಲ್ಲನೆ ಆಂಟಿಗೋನಸನ ಪಕ್ಷಪಾತಿಗಳನ್ನು ಗೆದ್ದು ತಿರುಗಿ ಬೆಬಿಲೋನಿಯ ದೇಶವನ್ನು ಸ್ವಾಧೀನಪಡಿಸಿಕೊಂಡನು. ಎರಡನೆಯಸಾರಿ ಇವನು ಈ ನಗರವನ್ನು ಕೈವಶಮಾಡಿಕೊಂಡು ಮೊದಲು ಕ್ರಿ. ಪೂ. ೩೦೨ ರ ವರೆಗೂ ಒಂಭತ್ತು ವರ್ಷಗಳ ತನಕ ಏನೆಲ್ಲ ನಡೆಯಿತೋ ತಿಳಿದುಕೊಳ್ಳಲು ಆಧಾರಗಳು ಯಾವುವೂ ಕಂಡುಬರುವುದಿಲ್ಲ. ೩೦೨ ರಲ್ಲಿ ಸೆಲ್ಯೂಕಸ್ ಲಾಸಿಮೇಕಸರಿಗೂ ಆಂಟಿಗೋನಸನಿಗೂ ಇಪ್ಸ ಎಂಬಲ್ಲಿ ಯುದ್ಧವು ನಡೆಯಿತು. ಅದರಲ್ಲಿ ಆಂಟಿಗೋನಸ್ಸು ಪತನಾದನು. ಸೆಲ್ಯೂಕಸನಿಗೆ ಪಾಲೆಸ್ಟೈನ್ ಮೊದಲುಗೊಂಡು ಭರತಖಂಡದವರೆಗೂ ಇರುವ ರಾಜ್ಯವು ಸರ್ವಸ್ವಾತಂತ್ರ್ಯಗಳೊಡನೆ ಕೈಸೇರಿತು. ಪಾಲೆಸ್ಟೈನ್ ದೇಶವು ಸೆಲ್ಯೂಕಸನಿಗೂ ಈಜಿಪ್ಟು ದೇಶದ ಕ್ಷೇತ್ರಪನಾದ ಟಾಲಮಿಾಗೂ ವಿವಾದಕ್ಕೆ ಕಾರಣವಾಯಿತು. ಆದರೆ ಟಾಲಮಿಾಯು ಸೆಲ್ಯೂಕಸನಿಗೆ ಕಷ್ಟಕಾಲದಲ್ಲಿ ಸಹಾಯ ಮಾಡಿದವನಾಗಿದ್ದುದರಿಂದ ಆ ವಿವಾದವು ಆಗ ಯುದ್ಧಕ್ಕೆ ಕಾರಣವಾಗಲಿಲ್ಲ.

ಸೆಲ್ಯೂಕಸನ ರಾಜ್ಯವಿಸ್ತಾರವು ಔನ್ನತ್ಯವನ್ನು ಹೊಂದಿದ ಆ ೩೦೫ನೆಯ ವರ್ಷದಲ್ಲಿಯೇ ಆತನು ಭರತವರ್ಷದ ಮೇಲೆ ದಂಡೆತ್ತಿ ಬಂದು ಚಂದ್ರಗುಪ್ತನಿಂದ ಪರಾಭವವನ್ನು ಹೊಂದಿ ಮಗಳನ್ನಿತ್ತು ಸಂಧಿಮಾಡಿಕೊಂಡನು.

ಸೆಲ್ಯೂಕಸನು ಬಲವಂತನಾದುದನ್ನು ನೋಡಿ ಮಿಕ್ಕ ಕ್ಷೇತ್ರಪರು ಆತನೊಡನೆ ವಿರೋಧವನ್ನು ಬೆಳೆಯಿಸಹತ್ತಿದರು. ಟಾಲಿಮಿ ಲಾಸಿಮೇಕಸ್ ಇವರಿಬ್ಬರೂ ಒಂದಾದರು. ಸ್ವಲ್ಪಕಾಲ ಆಂಟಿಗೋನಸನ ಮಗನಾದ ಡೆಮಿಟ್ರಿಯಸನು ಸೆಲ್ಯೂಕಸನೊಡನೆ ಸೇರಿಯೂ, ಕೆಲವು ಕಾಲ ಇದಿರಿಸಿಯೂ, ಕೆಲಕಾಲ ಆತನಿಗೆ ಅಧೀನನಾಗಿ ಹಲವು ಕಷ್ಟಗಳನ್ನು ಅನುಭವಿಸಿಯೂ, ಕ್ರಿ. ಪೂ, ೨೮೩ರಲ್ಲಿ ವಿಷವನ್ನು ಕುಡಿದು ಸತ್ತನು. ಆತನೊಡನಿದ್ದ ಸಂದರ್ಭಗಳಲ್ಲಿ ಸೆಲ್ಯೂಕಸನು ಉದಾರಿಯಾಗಿಯೂ ದಯಾರ್ದ್ರ ಹೃದಯನಾಗಿಯೂ ಧೈರ್ಯಶಾಲಿಯಾಗಿಯೂ ಇದ್ದಂತೆ ಕಾಣಿಸಿಕೊಳ್ಳುವನು. ಡೆಮೆಟ್ರಿಯಸನು ಹಲವು ದಾರಿಗಳನ್ನು ನೋಡಿ ಕೊನೆಗೆ ಸಿಕ್ಕಿಬಿದ್ದು, ಸೆಲ್ಯೂಕಸನಿಂದ ರಾಜಪುರುಷೋಚಿತವಾದ ಸೆರೆಯಲ್ಲಿಡಲ್ಪಟ್ಟಿದ್ದನು. ಆಗ ಲಾಸಿಮೇಕಸ್ಸು, ಆತನನ್ನು ಕೊಂದಲ್ಲಿ ಎರಡು ಸಾವಿರ ಟಾಲೆಂಟುಗಳನ್ನು ಕೊಡುವೆನೆಂದು ತಿಳಿಸಿದನು. ಅದಕ್ಕೆ ಸೆಲ್ಯೂಕಸನು ಕೋಪದಿಂದ ಉರಿದುಬಿದ್ದು, ಅಂತಹ ದುಷ್ಕಾರ್ಯವು ತಕ್ಕುದಲ್ಲವೆಂದು ಲಾಸಿಮೇಕಸನಿಗೆ ವಿಶದೀಕರಿಸಿ ಪ್ರತ್ಯುತ್ತರವನ್ನಿತ್ತನು.

ಒಂದು ಸಂದರ್ಭದಲ್ಲಿ ಕೆಲವು ಪ್ರಜೆಗಳು ಡೆಮೆಟ್ರಿಯುಸನ ಪಕ್ಷವನ್ನು ವಹಿಸಿದ್ದರು. ಆತನಿಗೆ ಸ್ವಲ್ಪ ವಿಜಯವೂ ಉಂಟಾಗಿದ್ದಿತು. ಬಲಗಳನ್ನು ಸೇರಿಸಿಕೊಂಡು, ಆತನು ಸ್ವಲ್ಪ ಅನಾರೋಗ್ಯದಿಂದಿದ್ದರೂ, ಅದನ್ನು ಲೆಕ್ಕಿಸದೆ ಒಳಸಂಚುಗಳನ್ನು ನಡೆಯಿಸುತ್ತಿದ್ದನು. ಅಂತಹ ಸಮಯದಲ್ಲಿ ಸೆಲ್ಯೂಕಸನು ಒಂದು ಢಾಲನ್ನು ಮಾತ್ರ ಕೈಯಲ್ಲಿ ಹಿಡಿದುಕೊಂಡು ಒಂಟಿಯಾಗಿ ಡೆಮೆಟ್ರಿಯನಿದ್ದ ಅಡವಿಗೆ ಹೋಗಿ ಅಲ್ಲಿಯ ಯುದ್ಧಭಟರನ್ನು ತನ್ನ ಪಕ್ಷಕ್ಕೆ ಸೇರಬೇಕೆಂದು ಹೇಳಿದನಂತೆ! ಆಹಾ! ಇದಕ್ಕೆ ಆತನಲ್ಲಿ ಎಷ್ಟು ಧೈರ್ಯಸಾಹಸಗಳಿರಬೇಕು?

ಇಷ್ಟು ಆತ್ಮವಿಶ್ವಾಸವುಳ್ಳವನಾದುದರಿಂದಲೇ ಆತನಿಗೆ ದೈವವು ಕೂಡ ಸಹಾಯವಾಗಿದ್ದಿತು.

ಲಾಸಿಮೇಕಸನು ಟಾಲಿಮಿಗಳ ರಾಜ್ಯದಲ್ಲಿ ಅಂತಃಕಲಹವನ್ನುಂಟುಮಾಡಿದನು. ಕ್ರಿ. ಪೂ. ೨೮೧ರಲ್ಲಿ ಲಾಸಿಮೇಕಸನು ಸೆಲ್ಯೂಕಸನೊಡನೆ ಯುದ್ಧಮಾಡಿ ಮಡಿದನು. ಟಾಲಮಿ ರಾಜ್ಯಕ್ಕೆ ಅರ್ಹನಾದ ಕೆರೌನಿಸ್ ಟಾಲಮಿ ಎಂಬವನು ಈತನಿಗೆ ಶರಣಾಗತನಾಗಿದ್ದನು. ಹೀಗಿದ್ದುದರಿಂದ, ಅಲೆಗ್ಝಾಂಡರನ ರಾಜ್ಯದಲ್ಲಿ

ಈಜಿಪ್ತುವೊಂದನ್ನುಳಿದು ಮಿಕ್ಕ ಭಾಗವೆಲ್ಲಕ್ಕೂ ಈತನೇ ಸರ್ವಾಧಿಕಾರಿಯಾಗಿ ಈಜಿಪ್ತು ಯುವರಾಜನನ್ನು ತನ್ನ ವಶವರ್ತಿಯಾಗಿ ಮಾಡಿಕೊಂಡು ನಿರಂಕುಶ ಪ್ರಭುತ್ವವನ್ನು ನಡೆಯಿಸುತ್ತಿದ್ದನು.

ಸೆಲ್ಯೂಕಸನಿಗೆ ಅಂಟಿಯೋಕನೆಂಬ ಮಗನಿದ್ದನು. ಸೆಲ್ಯೂಕಸನು ಡಿಮೆಟ್ರಿಯುಸನ ಮಗಳಾದ ಸ್ಟ್ರಾಟೋನಿಸೇ ಎಂಬವಳನ್ನು ಮದುವೆಯಾಗಿದ್ದನು. ಆಂಟಿಯೋಕಸನಿಗೆ ಆಕೆಯಮೇಲೆ ಅನುರಾಗವುಂಟಾಯಿತಂತೆ. ಆಗ ಸೆಲ್ಯೂಕಸನು ಮಗನ ಮೇಲಿನ ಪ್ರೇಮದಿಂದ ಆಕೆಯನ್ನು ಆಂಟಿಯೋಕನಿಗಿತ್ತು ಅವರಿಬ್ಬರನ್ನೂ ಅರ್ಧರಾಜ್ಯಕ್ಕೆ ಅಧಿಕಾರಿಗಳನ್ನಾಗಿ ನಿಯಮಿಸಿ ಕಳುಹಿಸಿದ್ದನು. (ಕ್ರಿ. ಪೂ. ೨೯೩.) ಅಂದಿನಿಂದಲೂ ಅವರಿಗೆ ಈ ಪೂರ್ವದೇಶಗಳನ್ನು ಕೊಟ್ಟುಬಿಟ್ಟು, ತಾನು, ತನ್ನ ತಂದೆ ಅಜ್ಜಂದಿರ ದೇಶವಾದ ಮೆಕಡೋನಿಯದಲ್ಲಿ ತನ್ನ ಕಡೆಯ ದಿನಗಳನ್ನು ಕಳೆಯಬೇಕೆಂದು ಆತನಿಗೆ ಉದ್ದೇಶವುಂಟಾದಂತೆ ತೋರುತ್ತಿದೆ. ಆ ಉದ್ದೇಶವನ್ನು ನೆರವೇರಿಸುವುದಕ್ಕಾಗಿ ಸೆಲ್ಯೂಕಸನು ಕ್ರಿ. ಪೂ. ೨೮೧ ರಲ್ಲಿ ಮೆಕಡೋನಿಯಾಕ್ಕೆ ಪ್ರಯಾಣಮಾಡಿದನು. ಅದರ ಹಿಂದೆಯೇ ಕೆರೌನಸ್ ಟಾಲೆಮಿಯೂ ಸತ್ತನು. ಮಧ್ಯಮಾರ್ಗದಲ್ಲಿಈ ಕೆರೌನಸನ ವಿಶ್ವಾಸಘಾತುಕದಿಂದ ಸೆಲ್ಯೂಕಸನು ಅಕಾಲಮರಣವನ್ನು ಹೊಂದಿದನು.

ಆತನಿಂದ ಸ್ಥಾಪಿಸಲ್ಪಟ್ಟ ರಾಜ್ಯವು ಬಹುಕಾಲ ನಡೆದು ಚರಿತ್ರೆಯಲ್ಲಿ ಪ್ರಸಿದ್ಧಿಯನ್ನು ಹೊಂದಿತು.



## ಮೆಗಾಸ್ತನೀಸು.

ಮೆಗಾಸ್ತನೀಸನ್ನು ಕುರಿತು ನಮಗೆ ವಿಶೇಷವೇನೂ ಗೊತ್ತಿಲ್ಲ. ಈತನ ಗ್ರಂಥವೂ ಇಲ್ಲ. ಇವನ ಅನಂತರದ ಗ್ರೀಕ ಗ್ರಂಥಕಾರರು ಈತನವೆಂದು ಕೆಲ ಕೆಲವು ವಾಕ್ಯಗಳನ್ನು ಅನುವಾದಿಸಿರುವುದರಿಂದ ಲೋಕದಲ್ಲಿ ಈತನ ಚರಿತ್ರೆಯು ತಿಳಿಯದೆ ಇದ್ದರೂ ಇತರ ವಿಷಯಗಳ ಚರಿತ್ರೆಯು ಪರಿಸ್ಫುಟವಾಗಿ ತಿಳಿಯಬರುವುದಕ್ಕೆ ಸಾಧ್ಯವಾಗಿದೆ.

ಮೆಗಾಸ್ತನೀಸು ಪಾರಸೀಕನೆಂತಲೂ, ಆಲೆಗ್ಝಾಂಡರನ ಹಿಂದೆ ಬಂದವನೆಂತಲೂ ಕೆಲವರು ಹೇಳುವರು. ಆದರೆ ಅವೆಲ್ಲ ಬರೀ ಊಹೆಗಳೇ ಸರಿ.

ಈತನು ಕ್ರಿ. ಪೂ. ೩೦೨ ರಲ್ಲಿ ಸೆಲ್ಯೂಕಸನಿಂದ ಚಂದ್ರಗುಪ್ತನ ಆಸ್ಥಾನದಲ್ಲಿ ರಾಯಭಾರಿಯಾಗಿ ಕಳುಹಿಸಲ್ಪಟ್ಟನು. ಈತನು ಪಂಜಾಬದೊಳಗಣ ನದಿ

ಗಳನ್ನು ಹೇಳುವುದರಿಂದ, ಆ ಮಾರ್ಗವಾಗಿ ಪಾಟಲೀಪುರಕ್ಕೆ ಬಂದಂತೆ ಊಹಿಸತಕ್ಕುದಾಗಿದೆ. ಆ ಪಟ್ಟಣದಲ್ಲಿ ಈತನು ಬಹುಕಾಲ ವಾಸವಾಗಿದ್ದನು. ಅದಕ್ಕೆ ಪೂರ್ವಭಾಗದಲ್ಲಿರುವ ಭರತವರ್ಷವನ್ನು ಈತನು ಕಣ್ಣಾರೆ ನೋಡಿರಲಿಲ್ಲ. ಕೆಲವರು ಈತನು ಚಂದ್ರಗುಪ್ತನೊಡನೆ ದೇಶಸಂಚಾರಮಾಡುತ್ತಿದ್ದನೆಂದು ಹೇಳುವರಲ್ಲದೆ, ಅದಕ್ಕೆ ಆಧಾರವು ಕಂಡುಬರುವುದಿಲ್ಲ. ಮುಖ್ಯವಾಗಿ ಬ್ರಾಹ್ಮಣರಿಂದ ಕೇಳಿ ಎಲ್ಲವನ್ನೂ ಇವನು ವರ್ಣಿಸಿರುವನು. ದೇಶಭಾಷೆಗಳನ್ನು ಚೆನ್ನಾಗಿ ತಿಳಿಯದಿದ್ದುದರಿಂದ, ಕೇಳಿದುದೊಂದು, ಅರ್ಥಮಾಡಿದುದೊಂದಾಗಿ ಈತನು ಕೆಲವು ಅದ್ಭುತಗಳನ್ನು ಬರೆದನೆಂಬುದಕ್ಕೆ ಸಂದೇಹವಿಲ್ಲ. ಆದರೂ ಕೆಲವರು ಹೇಳುವಂತೆ ಈತನು ಕಪಟಿಯಲ್ಲ. ಭಾಷೆಗಳು ಬಾರದುದರಿಂದಲೂ ಹಿಂದೂಗಳ ಪದ್ಧತಿಗಳನ್ನು ಗ್ರೀಕರ ಅನುಭವದಿಂದ ವಿಮರ್ಶಿಸುವುದರಿಂದಲೂ ಕೆಲವು ಲೋಪಗಳು ಉಂಟಾದುವೆಂದು ಹೇಳುವುದು ಸಮಂಜಸವು. ಇಷ್ಟೇ ಅಲ್ಲದೆ ಈತನ ಸಂಪೂರ್ಣ ಗ್ರಂಥವು ಇಲ್ಲವಾದಬಳಿಕ, ಈತನನ್ನು ದೂರಿ ಪ್ರಯೋಜನವೇನು? ಪ್ರಯೋನನವಿದ್ದರೂ ಅದೇತರ ನ್ಯಾಯವು? ತಿಳಿದವರೆಗೂ ದೇಶವನ್ನು ಕುರಿತೂ ಶೀತೋಷ್ಣ ಸ್ಥಿತಿಗಳನ್ನು ಕುರಿತೂ, ಪಶುಪಕ್ಷ್ಯಾದಿಗಳನ್ನು ಕುರಿತೂ, ಜಾತಿಮತ, ಆಚಾರವ್ಯವಹಾರಗಳನ್ನು ಕುರಿತೂ, ರಾಜ್ಯಾಂಗ ಪದ್ಧತಿಗಳನ್ನು ಕುರಿತೂ ವಿಷಯಗಳನ್ನು ಕೂಡಿಸಿಟ್ಟು, ಬರೆಯಿಸಿ, ಭಾರತವರ್ಷದ ಪ್ರಾಚೀನ ಚರಿತ್ರಾಂಶಗಳಿಗೆ ಹೆಚ್ಚಿನ ಆಧಾರಭೂತನಾದ ಈ ಮೆಗಾಸ್ತನೀಸು ನಮಗೆ ಚಿರಸ್ಮರಣೀಯನಲ್ಲವೇ?




**ಭದ್ರಂ ಶುಭಂ ಮಂಗಳಂ**

